ಸಾಹಿತ್ಯ–ಸಂಸ್ಕೃತಿ ಮಾಸಿಕ

ISSN 2320 - 9941



# ಪ್ರತಿಸ್ಪಂದ

ಕೊಡು – ಕೊಳ್ಳುವಿಕೆಗಳ ಸಂಕರ ...

ಬೆಲೆ : 10 ರೂ

ಸಂಪುಟ : 1   ಸಂಚಿಕೆ : 5   ಮೇ 2013



ಪ್ರಾಚೀನ ಭಾರತದ ಸ್ತ್ರೀ ಸಾಹಿತ್ಯ : ಪೌರಸ್ತ್ಯ ನೆಲೆಯ ವಿರುದ್ಧ ಓದು




ಜೇನ್ ಆಸ್ಟಿನ್ ಳ 'Pride and Prejudice' ಒಂದು ವಿಶ್ಲೇಷಣೆ



Nightingale ಮತ್ತು ಕೆಂಪು ಗುಲಾಬಿ



ಜನಾಂಗೀಯ ದ್ವೇಷದ ವೈರುಧ್ಯಗಳು ಮತ್ತು
The Merchant of Venice

# ಪ್ರತಿಸ್ಪಂದ

ಮೇ 2013
ಸಂಪುಟ : 1 ಸಂಚಿಕೆ : 5

**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಮುಖಪುಟ ವಿನ್ಯಾಸ ಕೃಪೆ:**
ಅಂತರ್ಜಾಲ

**ಚಂದಾ ವಿವರ:**
ಬಿಡಿ ಪ್ರತಿ 10 ರೂ
ವಾರ್ಷಿಕ ಚಂದಾ 120 ರೂ
ಸಂಸ್ಥೆಗಳಿಗೆ 150 ರೂ

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಪುಟವಾಗಿ ಬರೆಯಿರಿ.

## ಒಳಪುಟಗಳಲ್ಲಿ

ಪುಟ ಸಂಖ್ಯೆ

# ನಿಮ್ಮೊಂದಿಗೆ ....

"It is far harder to kill a phantom than a reality" Virginia Woolf

ಅಕ್ಷರ ಜ್ಞಾನ ಹೆಚ್ಚುತ್ತಾ ಹೋದಂತೆ ಪಠ್ಯಗಳು ಕಟ್ಟಿಕೊಡುವ ವಾಸ್ತವಗಳನ್ನು ನಂಬುವ ಜರೂರಿ ಹೆಚ್ಚಾಗುತ್ತಾ ಹೋಗುವುದು ಸಹಜವೆನ್ನಿಸಿದೆ. ನಿರ್ಮಿತ ವಾಸ್ತವವು ಸತ್ಯವೇ ಅಲ್ಲವೇ ಎಂಬುದನ್ನು ಪ್ರಶ್ನಿಸುತ್ತಾ ಕುತೂಹಲಕಾರಿ ತಿರುವುಗಳನ್ನು ಪರಿಚಯಿಸಿ ಕೊಳ್ಳುವುದೇ ವಿಮರ್ಶೆಯೆದುರಿಗಿನ ಮಹತ್ವದ ಸವಾಲಾಗಿದೆ. ಈ ಸವಾಲಿನ ಹಾದಿಯನ್ನು ಕ್ರಮಿಸುವ ಕ್ರಮಗಳು ಅನೇಕ ರೀತಿಯಾಗಿವೆ. ಸಾಹಿತ್ಯ ಮಾರ್ಗದಲ್ಲಿ ದಾಖಲಾಗಿರುವ ಪಠ್ಯಗಳು ನಿರ್ಮಿತಿಗಳು ಎಂಬ ಎಚ್ಚರ ತಡವಾಗಿಯಾದರೂ ನಮ್ಮ ನಡುವೆ ಇದೆ. ಇರಬೇಕು.

Little Narrativeಗಳನ್ನು ಮುನ್ನೆಲೆಗೆ ತಂದ ಸ್ತ್ರೀವಾದಿಗಳು ಮತ್ತು ಪರಿಧಿ ಅಂಚಿನ ಲೇಖಕರು ವಾಸ್ತವವನ್ನು ತಿರುಚಿ ತೋರುವ ರಾಜಕೀಯವನ್ನು ಪ್ರಶ್ನಿಸುತ್ತಾರೆ. ಬಂಧನಕ್ಕೊಳಗಾದ ಧ್ವನಿಗಳನ್ನು ಬಿಡಿಸಿ ಅವುಗಳ ಮಾತುಗಳನ್ನು ಕೇಳಿಸಿಕೊಳ್ಳುವ ತಾಳ್ಮೆ ತೋರುತ್ತಿದ್ದಾರೆ. ಈ ಬಂಧಿತ ವಾಸ್ತವಗಳು ತೆರೆದಿಡುತ್ತಿರುವ ಜೀವನ ಧೋರಣೆಗಳು, ಬದುಕಿನ ಶೈಲಿಗಳು ಭವಿಷ್ಯದ ನಡೆಯು ದಿಕ್ಕನ್ನು ನಿರ್ಧರಿಸುತ್ತಿರುವುದನ್ನು ಈಗಾಗಲೇ ಮಾನ್ಯತೆ ಪಡೆದಿರುವ ನೆಲೆಗಳು ಒಪ್ಪುವ ಸೌಜನ್ಯ ತೋರುತ್ತಿಲ್ಲ. ಕುತರ್ಕವನ್ನಾದರೂ ಬಳಸಿ ನೆಲದ ಧ್ವನಿಗಳನ್ನು ತಪ್ಪಾಗಿ ಅರ್ಥೈಸುವ ಧೋರಣೆಗಳನ್ನು ಅಕಾಡೆಮಿಕ್ ಸಂಶೋದಕರೇ ತೋರುತ್ತಿರುವುದು ಆಘಾತಕ್ಕೆ ಕಾರಣವಾಗಿದೆ.

Post- Colonial ಸಾಹಿತ್ಯವು ಮುಖ್ಯವಾಗಿ 'ಅಧಿಕಾರ' ದ ಸೃಷ್ಟಿ ಅದರ ಬಳಕೆ ಮತ್ತು ಅದರಿಂದಾಗುವ ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸುವ ಅವಶ್ಯಕತೆಯನ್ನು ಸಾರಿ ಹೇಳುತ್ತದೆ. Power Play ಯ ಹಿನ್ನಲೆಯಲ್ಲಿ ಸಾಹಿತ್ಯದ ಮರುಓದುಗಳು ಶೇಕ್ಸಪಿಯರ್ ನ ನಾಟಕಗಳಿಗಷ್ಟೇ ಸೀಮಿತವಾಗಿಲ್ಲ. ಭಾರತೀಯ ಇತಿಹಾಸದಲ್ಲಿ ಬಲವಾಗಿ ಬೇರೂರಿರುವ ವೈದಿಕ ಓದುಗಳ ಮಿತಿಗಳನ್ನು ಸೂಸಿ ಥಾರು ಮತ್ತು ಕೆ. ಲಲಿತ ಅಂತಹ ಸ್ತ್ರೀ ವಾದಿ ವಿಮರ್ಶಕರು ತೆರೆದಿಟ್ಟಿದ್ದಾರೆ. ಅವರ ವಿಮರ್ಶಾ ನೆಲೆಗೆ ಅವರು ಕಂಡುಕೊಂಡಿರುವ ದಾಖಲಾಗದ ಮಹಿಳಾ ಸಾಹಿತ್ಯ/ಮೌಖಿಕ ಸಾಹಿತ್ಯ ಅಪರೂಪದ ಸಂಗ್ರಹ.

ಅಧಿಕಾರದ ನೆಲೆಗಳು ಹೇಗೆ ಮನುಷ್ಯರ ಸ್ಥಾನ ಮಾನಗಳನ್ನು ಮೊದಲೇ ನಿರ್ಧರಿಸಿ ಅವರನ್ನು ಬದುಕಿನ ಆಟದಲ್ಲಿ ದಾಳವಾಗಿಸುತ್ತವೆ ಎಂಬ ಆಸ್ಕರ್ ವೈಲ್ಡನ ಪ್ರಚಲಿತ ಕತೆಯ ಓದು ಕುತೂಹಲಕರವಾಗಿದೆ. 'Communal' ಪದಕ್ಕೆ ವಿಶಾಲವಾದ ಅರ್ಥವಿದೆ. ಆದರೆ ಭಾರತದಲ್ಲಿ ಕೆಲ ದಶಕಗಳಿಂದ ನಡೆದ ಮತೀಯ ಸಂಘರ್ಷಗಳು ಈ ಪದಕ್ಕೆ ಭಾರತದ ಸನ್ನಿವೇಶದಲ್ಲಿ ಕೋಮುವಾದ ವೆಂದು ಓದಿಕೊಳ್ಳುವಂತೆ ಒತ್ತಾಯಿಸುತ್ತಿವೆ. ಈ ಪದಕ್ಕೆ ಇರುವ 'ಸಮುದಾಯಿಕ ಬದುಕು' ಎಂಬ ಇನ್ನೊಂದು ಅರ್ಥ ಯಾರಿಗೂ ತಿಳಿಯದಂತೆ 'ಅಧಿಕಾರ' ಮನಃಸ್ಥಿತಿಗಳು ನಮ್ಮ ಮನಸ್ಸುಗಳನ್ನು ಜಡ್ಡುಗಟ್ಟಿಸಿವೆ. ಇದು ಒಂದು ಉದಾಹರಣೆ ಮಾತ್ರ.

ವಂದನೆಗಳೊಂದಿಗೆ

– ಸಂಪಾದಕ



ಪ್ರಸ್ತುತ

# ಜನಾಂಗೀಯ ದ್ವೇಷದ ವೈರುಧ್ಯಗಳು ಮತ್ತು The Merchant of Venice

'Anti Semitism ' ಎಂಬ ಶಬ್ದ ಸಂಯೋಜನೆಯನ್ನು ಯಹೂದಿಗಳ ಮೇಲಿರುವ ಪೂರ್ವಾಗ್ರಹವನ್ನು ವಿವರಿಸಲು ಬಳಸಲಾಗಿದೆ. ಇದರ ಮೂಲವು ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ವೈರುಧ್ಯಗಳಿಂದ ಕೂಡಿದ್ದು ಯಹೂದಿಗಳ ಧಾರ್ಮಿಕ ಬದುಕಿನ ಮೇಲೆ ಹೆಚ್ಚು ಪರಿಣಾಮವನ್ನು ಬೀರಿತ್ತು. ಚರಿತ್ರೆಯಲ್ಲಿ ಅಷ್ಟೇ ಅಲ್ಲದೆ, ಇಂದು ಕೂಡ ಯಹೂದಿಗಳು ಧಾರ್ಮಿಕ ಅಲ್ಪಸಂಖ್ಯಾತರಾಗಿ ಕ್ರಿಶ್ಚಿಯನ್ನರ ಮತ್ತು ಇಸ್ಲಾಂ ಭೂಮಿಕೆಯಲ್ಲಿ ವಾಸಿಸುತ್ತಿದ್ದಾರೆ. ಯಹೂದಿಗಳು ' ದೇವರ ಸತ್ಯ' ವನ್ನು (God's truth) ನಿರಾಕರಿಸಿದ ಜನಾಂಗವೆಂದು ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳು ಬಿಂಬಿಸಿದ್ದವು. ಯಹೂದಿಗಳು ವಿಭಿನ್ನ ಜನಾಂಗದವರು ಎಂಬ ಕಾರಣಕ್ಕಾಗಿ ನಿರಂತರವಾಗಿ ಶೋಷಣೆ ಮತ್ತು ಅಪಮಾನಕ್ಕಿಡಾದರು. The Merchant of Venice ನಾಟಕದಲ್ಲಿ Shylock ಒಬ್ಬ ಯಹೂದಿ ಎಂಬ ಜನಾಂಗೀಯ ಕಾರಣಕ್ಕೆ ಈತನನ್ನು ಇಡೀ ವೆನಿಸ್ ನಗರ, ಪ್ರಮುಖವಾಗಿ ಕ್ರೈಸ್ತ ಧರ್ಮದವರು ಪರಕೀಯರಂತೆ ಕಾಣುತ್ತಾರೆ. ಪುನರುಜ್ಜೀವನ ಕಾಲದಲ್ಲಿ ಯಹೂದಿಗಳು ತಮ್ಮ ವಿರುದ್ಧ ಪ್ರಚಲಿತವಿದ್ದ ಪೂರ್ವಾಗ್ರಹಗಳನ್ನು ನಿಗ್ರಹಿಸಲು ಪ್ರಯತ್ನಿಸುತ್ತಿದ್ದರು.

ಇಂಗ್ಲೆಂಡಿನಲ್ಲಿ ಯಹೂದಿಗಳ ವಿರುದ್ಧ ಇದ್ದ ದ್ವೇಷ ಮತ್ತು ಪೂರ್ವಾಗ್ರಹ ಪೀಡಿತ ಧೋರಣೆಗಳು 1290 ನಂತರ ದ್ವಿಗುಣಗೊಂಡವು. ಯಹೂದಿಯೇತರ ಜನಾಂಗದವರು ಯಹೂದಿಗಳಿಂದ ಹೆಚ್ಚು ಹೆಚ್ಚು ಹಣವನ್ನು ಸಾಲದ ರೂಪದಲ್ಲಿ ದೋಚಿದರು. ಯಾರ್ಕ್‌ನಲ್ಲಿ ಸುಮಾರು 150 ಯಹೂದಿಗಳು ಹಿಂಸೆ ತಡೆಯಲಾರದೆ ಆತ್ಮಹತ್ಯೆ ಮಾಡಿಕೊಂಡರು. ಮೊದಲನೇ ರಿಚರ್ಡ್ ಯಹೂದಿಗಳ ಹತ್ಯೆಯನ್ನು ತಡೆದನು. ಆದರೆ ಮೊದಲನೇ ಎಡ್‌ವರ್ಡ್ 1272 ರಿಂದ 1307 ವರೆಗಿನ ಒಂದು ಶತಮಾನದ ಕಾಲ ತನ್ನ ಆಡಳಿತದ ಅವಧಿಯಲ್ಲಿ ಯಹೂದಿಗಳ ಶೋಷಣೆಯನ್ನು ಪುನರಾರಂಭಿಸಿದನು. ಯಹೂದಿಗಳು ತಮ್ಮ ಗುರುತಿಗಾಗಿ ಹಳದಿ ಗೆರೆಯುಳ್ಳ ವಸ್ತ್ರವನ್ನು ಧರಿಸಬೇಕಾಗಿದ್ದಿತು. ಅವರ ಮೇಲೆ ದುಬಾರಿ ತೆರಿಗೆ ಹೇರಲಾಗಿತ್ತು. ಯಾವುದೇ ಸಂದರ್ಭದಲ್ಲಿ ಇವರ ಕ್ರೈಸ್ತರೊಂದಿಗಿನ ಸಂಪರ್ಕವನ್ನು ನಿಷೇಧಿಸಲಾಗಿತ್ತು. ಅಂತಿಮವಾಗಿ ಎಡ್‌ವರ್ಡ್ ಯಹೂದಿಗಳನ್ನು ಇಂಗ್ಲೆಂಡಿನಿಂದ ಬಹಿಷ್ಕರಿಸಿದನು. ಆದರೂ ಕೆಲವೇ ಕೆಲವು ಯಹೂದಿಗಳು ಕಣ್ತಪ್ಪಿಸಿಕೊಂಡು ಇಂಗ್ಲೆಂಡಿನಲ್ಲಿ ನೆಲೆ ಕಾಣಲು ಸಾಧ್ಯ ಮಾಡಿಕೊಂಡರು.

16ನೇ ಶತಮಾನದಲ್ಲಿ ವೆನಿಸ್ ನಗರವು ಹೆಚ್ಚು ಬಲಿಷ್ಠ ಮತ್ತು ಸ್ವತಂತ್ರ ರಾಜ್ಯವಾಗಿ ಪರಿಣಮಿಸಿತ್ತು ಹಾಗೂ ಯಹೂದಿಗಳ ಅಶಾಂತಿ ಅಲ್ಲಿನ ಒಂದು ಪ್ರಮುಖ ಅಂಶವಾಗಿದ್ದಿತು. ಕಾನೂನಿನ ಪ್ರಕಾರ ಯಹೂದಿಗಳು ಮಣ್ಣಿನ ಗೋಡೆಗಳಿಂದ ನಿರ್ಮಿತವಾದ ಶಿಥಿಲವಾದ ಸೂರುಗಳಲ್ಲಿ ನಗರದಿಂದಾಚೆ ವಾಸವಾಗಿರಬೇಕಿತ್ತು. ಸೂರ್ಯಾಸ್ತದ ನಂತರ ಇವರನ್ನು ಬೀಗ ಮುದ್ರೆ ಹಾಕಿ ಬಂಧಿಸಿಡಲಾಗುತ್ತಿತ್ತು. ಕ್ರಿಶ್ಚಿಯನ್ನರು ಇವರನ್ನು ಕಾವಲು ಕಾಯುತ್ತಿದ್ದರು. ಹಗಲಿನಲ್ಲಿ ಗೃಹಬಂಧನದಿಂದ ಹೊರಗೆ ಹೋಗಲಿಚ್ಚಿಸುವವರು ತಮ್ಮ ಗುರುತಿಗಾಗಿ ಕೆಂಪು ಟೋಪಿಯನ್ನು ಧರಿಸುವುದು ಕಡ್ಡಾಯವಾಗಿದ್ದಿತು. ಇವರು ಆಸ್ತಿಯ ಹಕ್ಕಿನಿಂದ ವಂಚಿತರಾಗಿದ್ದರು. ಆದ್ದರಿಂದ ಗಿರವಿ (Usury) ವೃತ್ತಿಯನ್ನು ಜೀವನಾಧಾರಕ್ಕೆ ಅವಲಂಬಿಸಿದ್ದರು, ಬಡ್ಡಿಗೆ ಹಣವನ್ನು ಸಾಲದ ರೂಪದಲ್ಲಿ ನೀಡುವುದನ್ನು ತಮ್ಮ ಮೂಲ ಕಸುಬನ್ನಾಗಿಸಿಕೊಂಡರು. ಕ್ರಿಶ್ಚಿಯನ್ ಧರ್ಮವೂ ಈ ಪದ್ಧತಿಯ ವಿರುದ್ಧವಾಗಿತ್ತು. ಈ ಕಾರಣದಿಂದ ಧಾರ್ಮಿಕವಾಗಿ ಕ್ರಿಶ್ಚಿಯನ್ನರು ಯಹೂದಿಗಳನ್ನು ದ್ವೇಷಿಸಲಾರಂಭಿಸಿದರು. ರಾಣಿ ಎಲಿಜಬೆತ್ ಕಾಲದಲ್ಲಿ ಯಹೂದಿಗಳ ಮೇಲಿನ ದ್ವೇಷವು ಹೆಚ್ಚು ಪ್ರಚಲಿತದಲ್ಲಿತ್ತು.

Shakespeare ನ ಸಮಕಾಲೀನ ಬರಹಗಾರನಾದ 'Christopher Marlow' ತನ್ನ 'The Jew of Malta' ಎಂಬ ನಾಟಕದಲ್ಲಿ 'Barabas' ಎಂಬ

ಯಹೂದಿ ಪ್ರತಿನಿಧಿತ ಪಾತ್ರವನ್ನು ಅನಾಗರೀಕ ಹಂತಕನನ್ನಾಗಿ ಚಿತ್ರಿಸಿರುವುದು ಯಹೂದಿಗಳ ಸ್ಥಿತಿ-ಗತಿಯ ನೆಲೆಯನ್ನು ತಿಳಿಸುತ್ತದೆ.

***Rather had I, a Jew be hated thus***
***Than pities in a Christian poverty***
***For I can see no fruits in all their faith***
***But malice, falsehood and excessive pride***
***Which me thinks fits not their price.***

***(- The jew of Malta 117 - 121)***

ಯಹೂದಿಗಳು ಕ್ರಿಶ್ಚಿಯನ್ನರ ಬಗ್ಗೆ ಹೊಂದಿದ್ದ ವಿರೋಧದ ಸ್ವರೂಪವನ್ನು Marlow ನ ಈ ಮೇಲಿನ ವಾಕ್ಯಗಳು ಸ್ಪಷ್ಟವಾಗಿ ತಿಳಿಸುತ್ತವೆ. ಈ ನಾಟಕದ ಯಹೂದಿ Barabas ನನ್ನು ಈತನ ಅನೇಕ ಶತ್ರುಗಳು ಬಿಸಿ ನೀರಿನ ಹಂಡೆಯಲ್ಲಿ ಬೇಯಿಸುವಷ್ಟು ನಿಕೃಷ್ಟವಾಗಿ ನಡೆಸಿಕೊಳ್ಳುತ್ತಾರೆ. ಈ ನಾಟಕವನ್ನು ಪ್ರೇಕ್ಷಕರು ಇಷ್ಟಪಡುತ್ತಿದ್ದರು. ಈ ಪಾತ್ರವು Shakespeare ನಿಗೆ Shylock ಪಾತ್ರವನ್ನು ಸೃಷ್ಟಿಸಲು ಪ್ರಭಾವ ಬೀರುತ್ತದೆಂಬುದು ಬಹುಶ: ಅನೇಕರಿಗೆ ತಿಳಿದಿರಲಾರದು, ಆದರೆ The Merchant of Venice ನಾಟಕದ ಓದು ಈ ಅಭಿಪ್ರಾಯವನ್ನು ತಿಳಿಸುತ್ತದೆ.

ವೆನಿಸ್ಸಿನ ವರ್ತಕ (The Merchant of Venice) ಎಂಬ ನಾಟಕದಲ್ಲಿ Shakespeare ಯಹೂದಿಗಳ ಬಗ್ಗೆ ಇದ್ದ ಪೂರ್ವಾಗ್ರಹ ಪೀಡಿತ ಮನಃಸ್ಥಿತಿಯನ್ನು ಸಾಕ್ಷೀಕರಿಸುತ್ತಾನೆ. ಪ್ರಸ್ತುತ ಈ ನಾಟಕ ಜನಾಂಗೀಯ ದ್ವೇಷವನ್ನು ಪ್ರಮುಖ ಅಂಶವನ್ನಾಗಿಸಿಕೊಂಡಿದೆ. Shylock ಎಂಬ ಲೇವಾದೇವಿ, ಯಹೂದಿ ಎಂಬ ಕಾರಣಕ್ಕೆ ಕ್ರಿಶ್ಚಿಯನ್ನರ ದ್ವೇಷಕೊಳಗಾಗುತ್ತಾನೆ. ಈ ನಾಟಕವು ಜನಾಂಗೀಯತೆಯ (Racism) ಕಾರಣದ ಹಗೆತನ ಮತ್ತು ಹಿಂಸೆಯಿಂದ ಹೇಗೆ ವೆನಿಸ್ಸಿನಲ್ಲಿ ಪ್ರಧಾನವಾಗಿದ್ದ ಕ್ರಿಶ್ಚಿಯನ್ ಜನಾಂಗವೂ ಶೈಲಾಕ್ ಪಾತ್ರದ ಮೇಲೆ ದೌರ್ಜನ್ಯವೆಸಗುತ್ತದೆ ಎಂಬುದನ್ನು ಮನವರಿಕೆ ಮಾಡುತ್ತದೆ.

Shylockಗೆ ಎರಡು ರೀತಿಯ ಸಮಸ್ಯೆಯ ಸವಾಲುಗಳು ಎದುರಾಗುತ್ತವೆ. ಒಂದು ಈತ ಯಹೂದಿ ಜನಾಂಗಕ್ಕೆ ಸೇರಿರುವುದು; ಎರಡು ಬಡ್ಡಿ ವ್ಯವಹಾರದವನಾಗಿರುವುದು. Shylock ಒಬ್ಬ ಪ್ರಬುದ್ಧ ಮತ್ತು ಪ್ರಜ್ಞಾವಂತ ವರ್ತಕನಾಗಿ ಕಾಣಿಸಿಕೊಳ್ಳುತ್ತಾನೆ. Antonio ವಿನ ದ್ವೇಷಕ್ಕೆ ಪ್ರತಿಯಾಗಿ ಈತನು ಆಂಟೋನಿಯೋನ ಸಾಲದ ಕರಾರು ಪತ್ರದಲ್ಲಿ ನಿಗದಿತ ಮೂರು ತಿಂಗಳೊಳಗಾಗಿ ಪಡೆದ ಸಾಲದ ಹಣವನ್ನು ಮರುಪಾವತಿ ಮಾಡಲು ತಪ್ಪಿದಲ್ಲಿ, ಆತನ ಹೃದಯಭಾಗದಿಂದ ಮೂರು ಪೌಂಡ್ ಮಾಂಸವನ್ನು ಕತ್ತರಿಸಿಕೊಳ್ಳುವುದಾಗಿ ಉಲ್ಲೇಖಿಸಿರುತ್ತಾನೆ. ಆಂಟೋನಿಯೋನ ಅಸಹಾಯಕ ಸ್ಥಿತಿಯನ್ನು ಕ್ರಿಶ್ಚಿಯನ್ನರೇ ನಿರ್ಮಿಸಿದ ಕಾನೂನುಗಳಿಂದ ಕಟ್ಟಿಹಾಕುತ್ತಾನೆ. ದ್ವೇಷದ ಪ್ರತೀಕಾರವನ್ನು ತೀರಿಸಿಕೊಳ್ಳುವ ಸಮಯ ಕಾಯುತ್ತಿದ್ದ Shylock ಪ್ರೇಕ್ಷಕರ ದೃಷ್ಟಿಯಲ್ಲಿ ಮಾನವೀಯತೆಯನ್ನು ಮರೆಯುತ್ತಾನೆ. ವೆನಿಸ್ಸಿನ ನಾಯವಾದಿಗಳು 'ಅನುಕಂಪ' (Mercy) ತೋರೆಂದು ಮನವೊಲಿಸಲು ಪ್ರಯತ್ನಿಸಿದರೂ ಅವರನ್ನು ಧಿಕ್ಕರಿಸಿ ತಿರಸ್ಕರಿಸುತ್ತಾನೆ. ನ್ಯಾಯಕ್ಕೆ ನ್ಯಾಯ 'Justice for justice' ಬೇಕೆಂದು ಹಠ ಹಿಡಿಯುತ್ತಾನೆ.

ಆದರೆ Portia ಎಂಬ ಬೆಲ್ಮೆಂಟಾದ ಯುವರಾಣಿಯು ಆಂಟೋನಿಯೋ ಪರ ವಕೀಲಳಾಗಿ ನ್ಯಾಯಾಲಯವನ್ನೇ ವಿಸ್ಮಯಗೊಳಿಸುತ್ತಾಳೆ. ತನ್ನ ಮಾತುಗಾರಿಕೆಯ ಚಾಣಾಕ್ಷತನದಿಂದ ಅಮಾನವೀಯ ವರ್ತನೆಯ Shylock ಗೆ ಒಂದು ಹನಿ ರಕ್ತವನ್ನೂ ನೆಲಕ್ಕೆ ಚೆಲ್ಲದ ಹಾಗೆ ಹಾಗೂ ತೂಕ ವ್ಯತ್ಯಾಸವಾಗದಂತೆ ಸರಿಯಾಗಿ ಮೂರು ಪೌಂಡ್ ಮಾಂಸವನ್ನು ಮಾತ್ರ ಕತ್ತರಿಸಿಕೊಳ್ಳುವಂತೆ ತನ್ನ ವಾದವನ್ನು ಮಂಡಿಸುವುದರ ಮೂಲಕ ಎದುರು ಸವಾಲನ್ನು ಹಾಕುತ್ತಾಳೆ. ಇಲ್ಲಿ Shakespeare Shylock ನ ಉದ್ಧಟತನದ ವರ್ತನೆಯುನ್ನು ಖಂಡಿಸುವುದರ ಮೂಲಕ ಮಾನವೀಯತೆಯ ಸಾಕ್ಷಾತ್ಕಾರವನ್ನು ಮೆರೆದಿದ್ದಾನೆಂಬುದು ಹೊರನೋಟಕ್ಕೆ ಕಂಡು ಬರುತ್ತದೆ. ಆದರೆ ಯಹೂದಿಗಳನ್ನು, ಅವರ ಬುದ್ಧಿಶಕ್ತಿಯನ್ನು, ಪರಿಶ್ರಮವನ್ನು, ಪ್ರಾಬಲ್ಯವನ್ನು ಸಹಿಸದ ಪ್ರಬಲ ಕ್ರಿಶ್ಚಿಯನ್ ಜನಾಂಗವು ಹೇಗೆ ಪ್ರತಿಕ್ರಿಯಿಸುತ್ತದೆ ಮತ್ತು Revenge for Revenge

ಗಾಗಿ ಹೇಗೆ ಹಪಹಪಿಸುತ್ತದೆ ಎಂಬುದನ್ನು ತಿಳಿಸುವ ಪ್ರಯತ್ನ ಕೂಡ ಆಗಿದೆ ಎಂಬುದನ್ನು ಮರೆಯುವ ಹಾಗಿಲ್ಲ.

ಸುಪ್ರಸಿದ್ಧ ವೆನಿಸ್ಸಿನ ವರ್ತಕನಾದ Antonio ಗೆ ಯಾರಾದರೂ ಕ್ರಿಶ್ಚಿಯನ್ನರೇ ಸಾಲ ನೀಡಬಹುದಿತ್ತು ಮತ್ತು ಅವರಿಂದ ಆಂಟೊನಿಯೋ ಸಾಲ ಪಡೆಯಬಹುದಿತ್ತು. ಆದರೆ Antonio ಕೈಯಲ್ಲಿ ತನ್ನ ಬದ್ಧ ದ್ವೇಷಿಯಾದ ಯಹೂದಿ ಜನಾಂಗದ ತನ್ನ ಪ್ರತಿಸ್ಪರ್ಧಿ Shylockನಿಂದ, ತನ್ನ ಸ್ನೇಹಿತನಾದ Basanio ಗೆ ಹಣ ಕೊಡಿಸುವ ಹಿಂದೆ ನಾಟಕಕಾರನ ಉದ್ದೇಶ ಬೇರೆಯದೇ ಇದೆ ಎಂದು ತೋರುತ್ತದೆ. Shakespeare ಕ್ರಿಶ್ಚಿಯನ್ ಮತ್ತು ಯಹೂದಿ ಜನಾಂಗಗಳನ್ನು ಮುಖಾಮುಖಿ ಯಾಗಿಸಲು ಬಯಸುತ್ತಾನೆ. ತನ್ಮೂಲಕ ವೆನಿಸ್ಸಿನ ಪ್ರಮುಖ ಎರಡು ಜನಾಂಗದ ಪ್ರತಿನಿಧಿಗಳಾದ Antonio ಮತ್ತು Shylockರ ಪಾತ್ರಗಳನ್ನು ಜೀವಂತ ಪಾತ್ರಗಳನ್ನಾಗಿಸುತ್ತಾನೆ. ಜಗತ್ತಿನಲ್ಲಿ ಜನರ ನಡುವೆ ಇರುವ ಜನಾಂಗ ದ್ವೇಷ, ವರ್ಗ ಸಂಘರ್ಷ, ಜಾತಿ ಸಂಘರ್ಷ, ಭಾಷಾ ಸಂಘರ್ಷ, ಗಡಿ ಸಂಘರ್ಷ, ಪ್ರಬುದ್ಧ-ಅಪಭುದ್ಧ, ಬೌದ್ಧಿಕ ಅಬೌದ್ಧಿಕ, ಅನಕ್ಷರಸ್ಥ-ಅಕ್ಷರಸ್ಥ, ವಿದ್ಯಾವಂತ-ಅವಿದ್ಯಾವಂತ, ನಾಗರಿಕ ಅನಾಗರಿಕ, ಸಾಂಪ್ರದಾಯಿಕ-ವೈಜ್ಞಾನಿಕ, ಲಿಂಗಬೇದ, ಎಂಬಿತ್ಯಾದಿ ವೈರುಧ್ಯಗಳನ್ನು The Merchant of Venice ನಾಟಕವು, ಸೂಕ್ಷ್ಮ ಸಂವೇದನೆಗಳ ಮೂಲಕ ಪ್ರಶ್ನಿಸಲು ಪ್ರೇರಣೆ ನೀಡುತ್ತದೆ.

-ಶ್ರೀನಿವಾಸಪ್ಪ.ಜಿ
g.srinivasappa2@gmail.com



**ಸೃಜನಶೀಲ | ಹೆಜ್ಜೆ ಮೂಡದ ಹಾದಿಯ ಪಯಣ**

ಸಹಸ್ರ ನೋವುಗಳ ನಡುವೆ
ನಗುವುದ ಕಲಿತಿದ್ದೆ ನಲ್ಲೆ
ನಾ ಅರಿತ ಕಾರಣ ನೀ ಇದ್ದೆ ನನ್ನ ಬಾಳಲ್ಲೆ
ಬಾಳು ನಂದನವಾಗಿತ್ತು ಆಗ
ಹಸಿರು ತುಂಬಿ ಅರಳಿದ ಹೂವನ
ಪರಿಮಳದ ಕಂಪ ಸೂಸಿತ್ತಾಗ

ನಾ ಅರಸಿದ ಬಾಳು
ಸಹಸ್ರ ಮೈಲಿಗಳ ಯಾನ
ಕೂಡಿ ಬಂದಿತ್ತು ಸಾಧನೆಯ ಯೋಗ

ನಾ ಅರಿತ ಕಾರಣವಿಷ್ಟೆ
ನಾ ಗಳಿಸಿದ್ದೆ ನಿನ್ನ ಪ್ರೇಮಾನುರಾಗ

ನಾ ನಡೆದ ಹಾದಿಯ ಗುರುತು
ಹೆಜ್ಜೆ ಮೂಡದ ಹಾದಿ
ತಿರುಗಿ ನೋಡಿದರೀಗ ಶೂನ್ಯ

ಕಲಿತ ವಿದ್ಯೆಗಳೆಲ್ಲ ಕರ್ಣನ ವಿದ್ಯೆಗಳಾಗಿ
ಬಾಳ ಮುಸುಕುತಿದೆ ಘೋರಾಂಧಕಾರ.

-ರಾಮು ಟಿ.ಡಿ.
tdramu.td@gmail.com

**ವಿಶೇಷ ಸೂಚನೆ**

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಶದಲ್ಲಿ ಟೈಪ್ ಮಾಡಿ prathispandha@gmail.comಗೆ ಕಳುಹಿಸುವುದು.

ಇಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ವಿಚಾರಗಳಿಗೆ ಲೇಖಕರೇ ಜವಾಬ್ದಾರರು

ಲೇಖನಗಳನ್ನು ಕಳುಹಿಸುವ ಲೇಖಕರು ಓದುಗರ ಅನುಕೂಲಕ್ಕಾಗಿ ಹೆಸರು, ವಿಳಾಸ, ದೂರವಾಣಿ ಸಂಖ್ಯೆ, ಇ-ಮೇಲ್ ವಿಳಾಸವನ್ನು ನೀಡತಕ್ಕದ್ದು.

ಸಾಹಿತ್ಯ ಶೈಲಿ/ ರೂಪ

# Nightingale ಮತ್ತು ಕೆಂಪು ಗುಲಾಬಿ

(Oscar Wilde 19ನೇ ಶತಮಾನದ ಪ್ರಖ್ಯಾತ ಕತೆಗಾರ. ಡಬ್ಲಿನ್ ನಗರದಲ್ಲಿ (1854) ಜನಿಸಿದ ಆಸ್ಕರ್ ವೈಲ್ಡ್ ಆಂಗ್ಲ ಭಾಷೆಯಲ್ಲಿ ಪ್ರಾವೀಣ್ಯಗಳಿಸಿದ ಅನೇಕರಲ್ಲಿ ಬಹುಮುಖ್ಯವಾದವನು. ಚತುರಯುಕ್ತವಾದ ಸಂಭಾಷಣೆ (witty dialogue) ಮತ್ತು ಸೂತ್ರರೂಪದ ವಾಕ್ಯ (aphorisms)ಬಳಕೆಗೆ ಆಸ್ಕರ್ ವೈಲ್ಡ್ ಅನ್ವರ್ಥ.ಅವನ ಉಳಿದ ಸಮಕಾಲೀನರಂತಲ್ಲದೆ ನೂರು ವರ್ಷಗಳ ನಂತರವೂ ಅವನ ಸಾಹಿತ್ಯವನ್ನು ಓದುತ್ತಿರುವ ಆಸಕ್ತರನ್ನು ಉಳಿಸಿಕೊಂಡಿರುವ ವೈಲ್ಡ್ ತನ್ನ ವಿಡಂಬನೆ, ವಿಶ್ಲೇಷಣೆಗಳಿಂದ ಸಮಾಜವನ್ನು ಎದುರುಹಾಕಿಕೊಂಡವನು. "ನಡವಳಿಕೆಯು ಸಂಕೀರ್ಣತೆಗಳನ್ನು ನೈತಿಕ ಲೆಕ್ಕಾಚಾರಗಳು ನಿಭಾಯಿಸಲಾರವು" ಎಂಬ ಅವನ ತಿಳಿವನ್ನು ಲಂಡನ್‌ನಿನ ರಾಜಕೀಯ ವ್ಯವಸ್ಥೆ ಭ್ರಷ್ಟ ಮತ್ತು ಅನೈತಿಕವೆಂದು ಅಭಿಪ್ರಾಯಪಟ್ಟಿತು. ಅದಕ್ಕಾಗಿ ಆತ ನ್ಯಾಯಾಂಗ ನಿಂದನೆಯನ್ನು ಎದುರಿಸಬೇಕಾಯಿತು. ಕಲೆಯ ಪ್ರಭಾವ ಮತ್ತು ಅದರ ಪಾತ್ರದ ಕುರಿತು ನಡೆಯುತ್ತಿರುವ ಇತ್ತೀಚಿನ ಚರ್ಚೆಗಳಿಗೆ ಪ್ರತಿಫಲನಗಳನ್ನು ಈತನ ಸಾಹಿತ್ಯದಲ್ಲಿ ಕಾಣಬಹುದು. 'The Importance of being Earnest' ನಾಟಕ ಮತ್ತು ಶಾಶ್ವತ ಯೌವನಕ್ಕಾಗಿ ಸೈತಾನನ ಜೊತೆ ಒಪ್ಪಂದ ಮಾಡಿಕೊಳ್ಳುವವನ ಕತೆ ಹೇಳುವ ಕಾದಂಬರಿ 'Dorian Gray' ಅಸಂಖ್ಯಾತ ಓದುಗರನ್ನು ಹೊಂದಿವೆ. ನಮ್ಮನ್ನು ನಾವು ವಿಶ್ಲೇಷಿಸಿಕೊಳ್ಳಲು ಆಸ್ಕರ್ ವೈಲ್ಡ್ ಕನ್ನಡಿಯಾಗುತ್ತಾನೆ.

Oscar Wilde 19ನೇ ಶತಮಾನದ ಪ್ರಖ್ಯಾತ ಕತೆಗಾರ. ಈತನ ಕತೆ Nightingale and the Red rose ನಲ್ಲಿ ಪ್ರೀತಿಯಲ್ಲಿ ಬೀಳುವ ವಿದ್ಯಾರ್ಥಿಯೊಬ್ಬನಿದ್ದಾನೆ. ಓದುಗರಿಗೆ ವಿದ್ಯಾರ್ಥಿ ಹಾಗು ಅವನ ಪ್ರೇಯಸಿಯ ನಡುವಿನ ಸಂಬಂಧ ಏನು ಎಂಬುದನ್ನು ಆ ವಿದ್ಯಾರ್ಥಿಯ ದೃಷ್ಟಿಕೋನದಿಂದ ಮಾತ್ರ ಕೊಡಲಾಗಿದೆ. ಆತನ ಪ್ರೇಯಸಿಯ ಭಾವನೆಗಳಾಗಲೀ, ಅಭಿಪ್ರಾಯಗಳ ಚಿತ್ರಣವಾಗಲೀ ನಮಗೆ ಸಿಗುವುದಿಲ್ಲ. ಬದಲಾಗಿ ಆಕೆಯ ನಿರ್ಧಾರವನ್ನು ಮಾತ್ರ ಕೊನೆಯಲ್ಲಿ ಪ್ರಕಟಿಸಲಾಗಿದೆ. ಅದು ಹಾಗೇಕೆ ಎಂಬುದನ್ನು ಈ ಕಥಾ ವಿಶ್ಲೇಷಣೆಯ ಕೊನೆಯಲ್ಲಿ ನೀವೇ ಊಹಿಸುತ್ತೀರಿ. ವಿದ್ಯಾರ್ಥಿಗೆ ಆಕೆ ಒಂದು ಕರಾರು ಹಾಕುತ್ತಾಳೆ. ರಾಜಕುಮಾರ ಆಯೋಜಿಸಿದ್ದ ನೃತ್ಯ ಕಾರ್ಯಕ್ರಮದಲ್ಲಿ ಆಕೆಯೊಂದಿಗೆ ಆತ ನೃತ್ಯ ಮಾಡಬೇಕೆಂದಾದರೆ ಆತ ಕೆಂಪು ಗುಲಾಬಿಯನ್ನು ತಂದು ಕೊಡಬೇಕು. ಆಕೆ ಅವನ ಜೊತೆಯಲ್ಲಿ ನೃತ್ಯ ಮಾಡಲು ಒಪ್ಪುವುದು ಪ್ರೀತಿಯ ಸೂಚನೆಯೋ? ಮದುವೆಗೆ ಒಪ್ಪಿಗೆಯೋ? ಅಥವಾ ಬರೀ ವ್ಯವಹಾರವೋ? ಅಥವಾ ಆಕೆಗೆ ತನಗೆಷ್ಟು ಪ್ರಿಯಕರ ರಿದ್ದಾರೆಂದು ತೋರಿಸುವ ಪ್ರದರ್ಶನದ ಚಪಲವೋ? ಈ ಎಲ್ಲಾ ಅರ್ಥಗಳನ್ನು ಪರಿಗಣಿಸಬೇಕಾಗಿತ್ತು ಹುಡುಗ. ಏಕೆಂದರೆ ಅದು ಚಳಿಗಾಲದ ದಿನವಾಗಿದ್ದರಿಂದ ಕೆಂಪು ಗುಲಾಬಿ ಹೂಗಳು ಎಲ್ಲೂ ಅರಳುತ್ತಿರಲಿಲ್ಲ. ಅಸಂಭವವಾದ ಲಕ್ಷ್ಯವನ್ನು ಆಕೆ ಆತನಿಗೆ ತೋರಿಸಿದ್ದಾಳೆಂದರೆ ಆತನಿಂದ ಆಕೆ ತಪ್ಪಿಸಿಕೊಳ್ಳಲು ಹೂಡಿರುವ ವ್ಯೂಹವಿರಬಹುದೆಂಬ ತರ್ಕ ಆತನಿಗೆ ಹೊಳೆಯದೇ ಹೋಯಿತು. ಅರ್ಥಮಾಡಿಕೊಳ್ಳಲು ಇಚ್ಚಿಸುವ ವಯಸ್ಸೂ ಅವನದಲ್ಲ ಬಿಡಿ.

ಜಗತ್ತಿನ ಅನುಭವವಿಲ್ಲದ ಮುಗ್ಧ ಹುಡುಗನಿಗೆ ಇದ್ಯಾವುದೂ ತಿಳಿಯದೇ ಹೋಗುತ್ತದೆ. ಅಸಹಾಯಕನಾಗಿ ಅಳುತ್ತಾ ಕುಳಿತ್ತಿದ್ದಾಗ ಒಂದು ಕೋಗಿಲೆ ಇವನನ್ನು ನೋಡಿ, ಇವನೇ ನಿಜವಾದ ಪ್ರಿಯಕರ ಎಂದು ತೀರ್ಮಾನಿಸುತ್ತದೆ. 'ಅವನು ನೋವಿನಲ್ಲಿರುವಾಗ ನಾನೇನು ಹಾಡಲಿ, ಪ್ರೀತಿಯೇ ಮುತ್ತು, ರತ್ನ, ವಜ್ರ ವೈಡೂರ್ಯಕ್ಕಿಂತ ಮಿಗಿಲಾದದ್ದು, ಯಾರೂ ಕೊಂಡುಕೊಳ್ಳಲಾರದಂತದ್ದು. ಇಂತಹ ಭಾವನೆಯಿರುವ ಪ್ರಿಯಕರನ ಆಸೆಯನ್ನು ಈಡೇರಿಸಲೇ ಬೇಕೆಂದು ತೀರ್ಮಾನಿಸುತ್ತದೆ. ಇದು ಪ್ರಿಯಕರನಿಗಿಂತ ಭಾವುಕ



ಮತ್ತು ದಯಾಳು ಪಕ್ಷಿ. ಇಂತಹ ತೀರ್ಮಾನ ಕೋಗಿಲೆಯಂತಹ ಮುಗ್ಧ ಪಕ್ಷಿಲೋಕದ ಜೀವ ಮಾತ್ರ ಮಾಡಲು ಸಾಧ್ಯ. ಮನುಷ್ಯ ಲೋಕದಲ್ಲಿ ಇಂತಹ ಜೀವ ಅಸಂಭವ. ಕೋಗಿಲೆ ಕಾಡು ಮೇಡಿನಲ್ಲಿದ್ದ ಮರಗಳನೆಲ್ಲಾ ಸುತ್ತುತ್ತದೆ. ಎಲ್ಲಿಯೂ ಕೆಂಗುಲಾಬಿ ಸಿಗುವುದೇ ಇಲ್ಲ. ಕಡೆಗೊಂದು ಕೆಂಗುಲಾಬಿ ಮರ ಹೇಳುತ್ತದೆ: "ನನ್ನ ಹೂವುಗಳೆಲ್ಲಾ ಕೆಂಪು, ಆದರೆ ನನ್ನ ನರನಾಡಿಗಳನ್ನೆಲ್ಲಾ ಚಳಿಗಾಲ ಕೊರೆದು ಗಡ್ಡೆ ಕಟ್ಟಿದೆ, ಮಂಜು ನನ್ನ ಮೊಗ್ಗುಗಳನ್ನು ಕಿತ್ತು ಹಾಕಿದೆ, ಬಿರುಗಾಳಿ ನನ್ನ ಕೊಂಬೆ ಗಳನ್ನು ಮುರಿದು ಹಾಕಿದೆ. ಹಾಗಾಗಿ ನನ್ನ ಹೂಗಳು ಮಬ್ಬಾಗಿವೆ. ನಿನಗೆ ಕೆಂಗುಲಾಬಿಯೇ ಬೇಕೆಂದರೆ ಒಂದು ಕಠಿಣ ಹಾದಿ ಇದೆ". "ನನಗೆ ಭಯವಿಲ್ಲ, ನೀನು ಏನು ಹೇಳುತ್ತಿಯೋ ಹೇಳು" ಅನ್ನುತ್ತದೆ ಕೋಗಿಲೆ.

"ನಿನಗೆ ಕೆಂಗುಲಾಬಿ ಬೇಕಾದರೆ ನೀನು ಹಾಡುತ್ತಾ ನಿನ್ನ ಹೃದಯದ ರಕ್ತವನ್ನು ನನ್ನ ಮುಳ್ಳಿನ ಮೂಲಕ ನನ್ನ ದೇಹದಲ್ಲಿ ಹರಿಸು. ನಿನ್ನ ಹಾಡು ಹಾಗು ರಕ್ತ ಇಡೀ ರಾತ್ರಿ ನನ್ನ ನರಗಳಲ್ಲಿ ಹರಿದು ಬೆಳಿಗ್ಗೆ ಕೆಂಗುಲಾಬಿ ಅರಳುತ್ತದೆ." ಹೇಳಿತು ಮರ. "ಪ್ರೀತಿಯು ಜೀವಕ್ಕಿಂತ ಮಿಗಿಲು, ನನ್ನ ಹೃದಯ ಒಬ್ಬ ಮನುಷ್ಯನ ಹೃದಯಕ್ಕಿಂತ ದೊಡ್ಡದಲ್ಲ" ಎಂದು ತೀರ್ಮಾನಿಸಿ ಸಾವಿನ ಮನೆಯ ಕದ ತಟ್ಟಲು ಕೋಗಿಲೆ ಒಪ್ಪಿಕೊಳ್ಳುತ್ತದೆ. ಆ ರಾತ್ರಿ ತನ್ನ ಹೃದಯವನ್ನು ಮುಳ್ಳಿಗೆ ಚುಚ್ಚಿ ಜೋರು ಜೋರಾಗಿ ಹಾಡತೊಡಗುತ್ತದೆ, ಮುಳ್ಳು ನಿಧಾನವಾಗಿ ಕೋಗಿಲೆಯ ಹೃದಯವನ್ನು ಚುಚ್ಚಿ ರಕ್ತ ಹರಿಯ ತೊಡಗುತ್ತದೆ, ಅರಳಿದ ಗುಲಾಬಿ ಮಾಸಲು ಕೆಂಪು ಬಣ್ಣದಾಗಿತ್ತು. ರಕ್ತ ಮರದ ನರಗಳಲ್ಲಿ ಹರಿದಂತೆ ಅದು ಗುಲಾಬಿ, ಕೇಸರಿ ಬಣ್ಣಗಳನ್ನು ಪಡೆದು ಕೊಳ್ಳ ತೊಡಗುತ್ತದೆ, ಕೊನೆ ಕೊನೆಗೆ ಕೋಗಿಲೆ ರಕ್ತ ಕಳೆದುಕೊಂಡು ಅದರ ಧ್ವನಿ ನಿಧಾನವಾಗತೊಡಗುತ್ತದೆ, ಕಂಠ ಗದ್ಗದಿತವಾಗ ತೊಡಗುತ್ತದೆ. ಅದರ ಕೊನೆಯ ಒಂದು ಚೀತ್ಕಾರ ದೊಂದಿಗೆ ಗುಲಾಬಿಯು ಕೆಂಪಾಗಿ ಬದಲಾಗುತ್ತದೆ. ಆನಂದದಿಂದ "ನೋಡು, ನೋಡು ಈಗ ಕೆಂಗುಲಾಬಿ ಮೂಡಿದೆ" ಎಂದು ಹೇಳುವ ಹೊತ್ತಿಗೆ ಕೋಗಿಲೆ ಸಾವನ್ನಪ್ಪಿ ಹುಲ್ಲಿನಲ್ಲಿ ಮುಚ್ಚಿ ಹೋಗಿರುತ್ತದೆ.

ಮಧ್ಯಾಹ್ನ ಕಿಟಕಿ ತೆಗೆದು ನೋಡಿದ ಹುಡುಗನಿಗೆ ಉತ್ಕಟವಾದ ಆನಂದವಾಗುತ್ತದೆ. ತಕ್ಷಣವೇ ತಾನು ಪ್ರೀತಿಸಿದ ಹುಡುಗಿಗೆ "ನೀನು ಹೇಳಿದ ಹೂವು ತಂದಿದ್ದೇನೆ ತೆಗೆದುಕೋ, ಇವತ್ತು ನಾವಿಬ್ಬರೂ ನಮ್ಮ ಪ್ರೀತಿಯ ಬಗ್ಗೆ ಮಾತಾಡುತ್ತಾ ನೃತ್ಯ ಮಾಡೋಣ ಅಂದಾಗ ಹುಡುಗಿ ಮುಖ ಸಿಂಡರಿಸಿಕೊಂಡು "ಈ ಕೆಂಪು ನನ್ನ ಡ್ರೆಸ್ಸಿಗೆ ಹೊಂದುವುದಿಲ್ಲ. Chamberlainನ ಅಣ್ಣನ ಮಗ ನನಗೆ ಚಿನ್ನದ ಒಡವೆಗಳನ್ನು ಕಳಿಸಿದ್ದಾನೆ. ಅವು ನೀನು ತಂದಿರುವ ಗುಲಾಬಿಗಿಂತ ದುಬಾರಿಯಾದವು" ಅಂದಾಗ ಹುಡುಗ ಗುಲಾಬಿಯನ್ನು ಬೀದಿಗೆಸೆಯುತ್ತಾನೆ. "ನೀನೊಬ್ಬ ಮೋಸಗಾರಳು" ಎಂದು ಕೂಗುತ್ತಾನೆ. "ಈ ನಿನ್ನ ನಡವಳಿಕೆಯೇ ತೋರಿಸುತ್ತದೆ ನೀನೆಷ್ಟು ಒರಟನೆಂದು, ಎಷ್ಟಾದರೂ ನೀನೆಷ್ಟರವನು, ಒಬ್ಬ ಸಾಮಾನ್ಯ ವಿದ್ಯಾರ್ಥಿ, Chamberlainನ ಅಣ್ಣನ ಮಗನ shoeನಲ್ಲಿರುವ buckleಗಳಲ್ಲಿರುವ ಬೆಳ್ಳಿಯೂ ನಿನ್ನಲ್ಲಿಲ್ಲ" ಎಂದು ಹೇಳಿ ಎದ್ದು ಹೋಗುತ್ತಾಳೆ.

ಪ್ರೀತಿ ಎನ್ನುವುದೊಂದು ಮಿಥ;. ಕ್ಷುಲ್ಲಕ ವಸ್ತು. ಅದು ಏನು ಹೇಳುವುದೋ ಅದನ್ನು ಮಾಡುವುದಿಲ್ಲ. ನಿಜವಲ್ಲದ ವಸ್ತುಗಳನ್ನು ನಂಬಿಸುತ್ತದೆ, ನಂಬುವಂತೆ ಮಾಡುತ್ತದೆ. ಹಾಗಾಗಿ ನಾನು ವಸ್ತುನಿಷ್ಠ ಹಾಗು ವ್ಯಾವಹಾರಿಕ ಜಗತ್ತಿನಲ್ಲಿ ಬದುಕಬೇಕೆಂದರೆ ಓದುವುದೊಂದೇ ದಾರಿ ಎಂದು ವಿದಾರ್ಥಿ ದೂಳು ಹಿಡಿದ ಪುಸ್ತಕದ ರಾಶಿಯಲ್ಲಿ ಪುಸ್ತಕಗಳನ್ನು ಹುಡುಕ ತೊಡಗುತ್ತಾನೆ. ಆಧುನಿಕರಿಗೆ ಈ ಕತೆಯನ್ನು ಓದಿದರೆ, ಪ್ರೀತಿಸುವ ಹುಡುಗನ ಬಗ್ಗೆ ಅನುಕಂಪವೇ ಹರಿದಾಡುತ್ತದೆ. ಆತನ ಬಗ್ಗೆ ಅಯ್ಯೋ ಪಾಪವೆನ್ನಿಸುತ್ತದೆ. ಹುಡುಗಿಯೊಡನೆ ನೃತ್ಯ ಮಾಡುವ ಆತನ ಆಸೆ ಸಣ್ಣ ವಿಚಾರವೆನ್ನಿಸುತ್ತದೆ. ಆತನಿಗೆ ಸಹಾಯ ಮಾಡಲು ಹೊರಡುವ ಕೋಗಿಲೆಯದಂತು, unconditional ಪ್ರೋತ್ಸಾಹ ಹಾಗು ತರ್ಕ ಮೀರಿದ ಕಾಳಜಿ ಹಾಗು ದಯೆ. ಯಾರನ್ನೋ ಪ್ರೀತಿಸುವ ವಿದ್ಯಾರ್ಥಿಗೆ ಯಾವ ಸೂಚನೆಯನ್ನು ಕೊಡದೆ ಆತನಿಗೆ ಬೇಕಾದ ಕೆಂಗುಲಾಬಿಯನ್ನು ದೊರಕಿಸಲು ಕೋಗಿಲೆ ಪ್ರಾಣ ತ್ಯಾಗಕ್ಕೂ ತಯಾರಾಗುತ್ತದೆ.ಪ್ರೀತಿಗೆ ಪ್ರೋತ್ಸಾಹ

ಅದರ ಪರಮ ಗುರಿ, ಅದು ಯಾರೇ ಆಗಿರಲಿ ತನಗೆ ಗೊತ್ತಿರಲಿ, ಗೊತ್ತಿಲ್ಲದೇ ಹೋಗಲಿ, ಅದು ತನ್ನ ಹೃದಯದ ರಕ್ತವನ್ನು ಗುಲಾಬಿಯ ಮುಳ್ಳಿನ ಮೂಲಕ ಹರಿದು ಹೋಗಲು ಬಿಡುತ್ತದೆ, ಸಾಯುತ್ತದೆ .

ಆದರೆ ನಾವು ಬದುಕಿರುವುದು ಆಧುನಿಕ ಯುಗದಲ್ಲಿ dating, dancing ಎಲ್ಲವೂ ಸಾಮಾನ್ಯ. "Dating is an end in itself", dating ಹೋಗುವವರೆಗೂ ball partyಗಳಲ್ಲಿ ನೃತ್ಯ ಮಾಡುವವರಿಗೆ ಯಾವುದೇ commitment ಗಳಿರುವುದಿಲ್ಲ. ಆಧುನಿಕ ಸಂಸ್ಕೃತಿಯ ಪ್ರೇಮಕ್ಕೂ consumption culture ಗೂ ಅವಿನಾಭಾವ ಸಂಬಂಧವಿದೆ. ಹೆಣ್ಣು ಮತ್ತು ಗಂಡುಗಳು ಇಲ್ಲಿ ವಸ್ತುಗಳಷ್ಟೇ. ಹೆಣ್ಣೆಂಬ ವಸ್ತು ಚೆನ್ನಾಗಿದ್ದರೆ ಅದಕ್ಕೆ ಹೆಚ್ಚು ಬೇಡಿಕೆ, ಅದನ್ನು ಗಂಡು ಸಾರ್ವಜನಿಕ ಸ್ಥಳಗಳಲ್ಲಿ ಸ್ತುತಿಸಿ ತನ್ನ popularity ಯನ್ನು ಹೆಚ್ಚಿಸಿಕೊಳ್ಳುವುದು ಪುರುಷನ ಉದ್ದೇಶ. ಅದು ಚೆನ್ನಾಗಿಲ್ಲವೆಂದರೆ, ಅದನ್ನು ಗೌಪ್ಯವಾಗಿಟ್ಟು, ತನ್ನ ಉದ್ದೇಶಗಳನ್ನು ತೀರಿಸಿಕೊಳ್ಳುವುದು ಆತನ ಗುರಿ. ಅದೇ ರೀತಿ ಹೆಂಗಸು ಗಂಡನ್ನು ಆಕರ್ಷಿಸಲು, ಆತನಿಗೆ ಆರ್ಥಿಕ ಲಾಭವಾಗುವಂತೆ, ಆತನ ಇಚ್ಛಾನುಸಾರ, ಆತನ ಪ್ರಾಬಲ್ಯ, ದೌರ್ಬಲ್ಯಗನುಗುಣವಾಗಿ ವರ್ತಿಸುವುದು, ಗಂಡನ್ನು ವಸ್ತುವನ್ನಾಗಿ ನೋಡುವ ಪರಿ ಗಂಡು, ಹೆಣ್ಣು ಇಬ್ಬರೂ ವರ್ತಿಸುವುದು ತನಗೇನು ಲಾಭ ಎನ್ನುವ ದೃಷ್ಟಿಯಿಂದ ಅಷ್ಟೇ. ಇದೇ consumerist culture. ಎಲ್ಲೆಲ್ಲೂ ಲಾಭ–ಲೆಕ್ಕಾಚಾರವೇ. ಇದೇ power politics. ಇಂತಹ power politics ನಲ್ಲಿ ಬದುಕುವ ನಾವು ಕತೆಯಲ್ಲಿರುವ ಪ್ರೇಯಸಿಯನ್ನು arrogant ಎಂದು ಕರೆಯುತ್ತೇವೆ. ಅಷ್ಟೊಂದು ಕಷ್ಟ ಪಟ್ಟಿರುವ ಹುಡುಗನ ಜೊತೆ ನೃತ್ಯ ಮಾಡಿದ್ದರೇನು ಹೋಗುತಿತ್ತು ಅನ್ನುತ್ತೇವೆ. ಇಷ್ಟು ಸಣ್ಣ ವಿಚಾರ ಇಷ್ಟು ಗಂಭಿರವಾಯಿತೇ ಅನ್ನಿಸುತ್ತದೆ. ಇಲ್ಲಿ ಎಲ್ಲರಿಗಿಂತ ಗಂಭೀರವಾಗುವುದು ಕೋಗಿಲೆಯ ಪರಿಸ್ಥಿತಿ. ಆದರೆ ಕತೆ ನಡೆಯುವುದು Victorian ಕಾಲದಲ್ಲಿ. ಅದು consumerist ಯುಗವಾಗಿರಲಿಲ್ಲ. ನಾಗರೀಕತೆಯ ಬೆಳವಣಿಗೆ ಮನುಷ್ಯನಲ್ಲಿ ಮೂಲಭೂತವಾಗಿ ಶಿಸ್ತು, ಸಂಯಮ, ಸ್ವಯಂನಿಯಂತ್ರಣವನ್ನು ಬೆಳೆಸುವುದರಿಂದಲೇ ಆಗಿದೆ. ಇಲ್ಲವಾದರೆ ಅವನೂ ಮೃಗವಾಗಿಬಿಡುತ್ತಿದ್ದ. ಅನಾದಿ ಕಾಲ ದಿಂದಲೂ ಲೈಂಗಿಕ ಶಿಸ್ತು ಎಲ್ಲಾ ಶಿಸ್ತುಗಳಲ್ಲಿಯೂ ಪ್ರಮುಖ ಶಿಸ್ತಾಗಿತ್ತು, ಈ ಶಿಸ್ತನ್ನು ಬೆಳೆಸುವಲ್ಲಿ ಮನುಕುಲ ಹಲವಾರು ಮಾರ್ಗಗಳು, ಮೂಲಗಳು, ವಿಧಾನ ಗಳನ್ನು ಕಂಡುಕೊಳ್ಳುತ್ತಲೇ ಇದೆ, ಸಾಕಷ್ಟು ಬುದ್ಧಿಶಕ್ತಿಯನ್ನೂ ವ್ಯಯಿಸುತ್ತಿದೆ. ಎಲ್ಲಾ ವಿಧಾನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಮೂಲಧಾತು ಮಾತ್ರ ಹೆಣ್ಣು.

ಈಗ ಮತ್ತೆ ವಿಕ್ಟೋರಿಯನ್ ಲೈಂಗಿಕ ಆದರ್ಶಗಳನ್ನು ನೋಡೋಣ. ಆ ಕಾಲದ ಬ್ರಿಟನ್‌ನಲ್ಲಿ ಪ್ರೀತಿ ಪ್ರೇಮಗಳು ವ್ಯಕ್ತಿಯ ಜೀವನವನ್ನು ನಿರ್ಧರಿಸುತ್ತಿದ್ದವು. ಪ್ರೇಮದ move ಗಳು ಬರೀ Romantic interlude ಗಳಾಗಿರಲಿಲ್ಲ. ಯಾಕೆಂದರೆ ಹೆಣ್ಣಿಗೆ 21 ವರ್ಷವಾದ ಕೂಡಲೆ ಆಕೆಗೆ ಆಸ್ತಿಯಲ್ಲಿ ಪಾಲು ಕೊಡಬೇಕಿತ್ತು. ಅದಾದ ನಂತರ ತಂದೆಗೆ ಕೂಡ ಆಕೆಯ ಆಸ್ತಿಯಲ್ಲಿ ಅಧಿಕಾರವಿರಲಿಲ್ಲ. ಮದುವೆಯಾದ ಕೂಡಲೆ ಆಕೆಯ ಆಸ್ತಿಯ ಹಕ್ಕು ಆಕೆಯ ಗಂಡನ ಕೈ ಸೇರುತ್ತಿತ್ತು. ತನ್ನ ಆಸ್ತಿಯಲ್ಲಿ ಆಕೆಗೆ ವಿಲ್ ಮಾಡುವ ಹಕ್ಕು ಕೂಡ ಇರಲಿಲ್ಲ. ಹಾಗಾಗಿ ಮದುವೆ ಸಂದರ್ಭದಲ್ಲಿ ಹಣಕಾಸಿನ ವಿಷಯಗಳನ್ನು ಮದುವೆಯ ಎರಡೂ party ಗಳು ಘೋಷಿಸಬೇಕಿತ್ತು. ತಮ್ಮ ಆಸ್ತಿಗಳನ್ನು ಬಹಿರಂಗ ಪಡಿಸಬೇಕಿತ್ತು. ಹಾಗಾಗಿ ಮದುವೆಗಳು business deal ಗಳಾಗಿದ್ದವು.

ಹಾಗಾಗಿ ಕಠಿಣವಾದ ನಿಯಮಗಳಿಗೆ ಹೆಣ್ಣು ಒಳಪಡಬೇಕಿತ್ತು. ತನಗಿಂತ ಆರ್ಥಿಕವಾಗಿ ಮೇಲಿನ ಸ್ತರದಲ್ಲಿರುವವರನ್ನು ಪರಿಚಯ ಮಾಡಿಸದ ಹೊರತು ಹೆಣ್ಣು ಮಾತಾಡಿಸುವಂತಿರಲಿಲ್ಲ. ಪರಿಚಯವಾದ ನಂತರ ಕೂಡ, ಆರ್ಥಿಕವಾಗಿ ಮೇಲಿನ ಸ್ತರದಲ್ಲಿರುವ ವ್ಯಕ್ತಿ ಇಷ್ಟಪಟ್ಟರೆ ಮಾತ್ರ ಪರಿಚಯ ಮುಂದುವರೆಸಬಹುದಿತ್ತು. ಅವರಿಗೆ ಬೇಡವೆಂದರೆ, ಆರ್ಥಿಕವಾಗಿ ಕೆಳವರ್ಗದಲ್ಲಿರುವ ವ್ಯಕ್ತಿಯನ್ನು ignore ಮಾಡಬಹುದಿತ್ತು, ಅಥವಾ ಮಾತನಾಡಿಸದೇ ಹೋಗಬಹುದಿತ್ತು. ಹೆಣ್ಣು ಒಬ್ಬ gentlemen ಜೊತೆ ಮಾತನಾಡುವ ಹಾಗಿರಲಿಲ್ಲ. ಅಂತರವಿರದೆ 'ಡೆಯುವ ಹಾಗಿರಲಿಲ್ಲ.ಹೆಣ್ಣಿನ ಕೈಯಿನ ಒರಟು ಭಾಗವನ್ನಷ್ಟೇ ಚುಂಬಿಸ ಬಹುದಾಗಿತ್ತು. ಆಕೆ ಯಾರನ್ನೂ ದೃಷ್ಟಿಸಿ ನೋಡುವ ಹಾಗಿರಲಿಲ್ಲ. ತಲೆಯೆತ್ತಿ ರಸ್ತೆಗಳಲ್ಲಿ ನಡೆಯುವ ಹಾಗಿರಲಿಲ್ಲ. ಮನೆಯಲ್ಲಿ ಒಬ್ಬಳೇ ಇದ್ದಾಗ

ಯಾರಾದರು ಬಂದರೆ receive ಮಾಡುವ ಹಾಗಿರಲಿಲ್ಲ. ಮದುವೆಗೆ ಮುಂಚೆ ಎರಡೂ ಪಾರ್ಟಿಗಳ ಬ್ಯಾಂಕ್ ಖಾತೆಗಳನ್ನು ಪರೀಕ್ಷಿಸಲಾಗುತ್ತಿತ್ತು. ಆಸ್ತಿ ಪಾಸ್ತಿಗಳನ್ನು ತನಿಖೆ ಮಾಡಲಾಗುತ್ತಿತ್ತು. ಹಣ ಹಲವಾರು ದೇಶಗಳಿಂದ ಹಲವಾರು ರೂಪಗಳಲ್ಲಿ, ವಿಧಾನಗಳಲ್ಲಿ ಇಂಗ್ಲೆಂಡಿಗೆ ಹರಿದು ಬರುತ್ತಿತ್ತು. ವಿಕ್ಟೋರಿಯನ್ ಇಂಗ್ಲೆಂಡ್ ಬಹಳ ಸಮೃದ್ಧವಾಗಿತ್ತು. ಸೂರ್ಯ ಮುಳುಗದ ಸಾಮ್ರಾಜ್ಯವಾಗಿತ್ತು. ಸುಖವಾಗಿದ್ದಾಗ ಭೋಗಿಸಲು ಹೆಣ್ಣು ಬೇಕು, ಆದರೆ ಈ ಹೆಣ್ಣನ್ನು ಶಿಸ್ತಿನ ಚೌಕಟ್ಟಿನಲ್ಲಿಡಲಾಗಿತ್ತು. ಈ ಶಿಸ್ತುಗಳನ್ನು, ನಿಯಮಗಳನ್ನು ಪೋರೈಸಿದ್ದರೆ ಮಾತ್ರ ಹೆಣ್ಣು ಸಿಗುತ್ತಿತ್ತು. ಬ್ರಿಟಿಷ್ ಸಾಮ್ರಾಜ್ಯದ ಏಳಿಗೆಗೆ ಇಂಗ್ಲೆಂಡಿನ ಜನರ ಶಿಸ್ತೇ ಕಾರಣ ಎಂದು ಅವರು ನಂಬಿದ್ದರು. ಶಿಸ್ತೇ ಇಲ್ಲದಿದ್ದರೆ ಬ್ರಿಟನ್ ಮತ್ತೆ ಅವನತಿಗೆ ಹೋಗುವುದೆಂದು ಅವರಿಗೆ ಗೊತ್ತಿತ್ತು. ಶಿಸ್ತು perpetual ಆಗಿರಲಿ ಎಂಬುದೇ ಅವರ ಅಭೀಷ್ಟವಾಗಿತ್ತು. ಹಣ ಮಾತ್ರವೇ ಅವರಿಗೆ ಪ್ರಮುಖವಾಗಿತ್ತು. ಅದು ಒಬ್ಬ ಶ್ರೀಮಂತ, ರಾಜ, ವ್ಯಾಪಾರಿ, ವಿಜ್ಞಾನಿ, ಸಾಹಿತಿಯಿಂದ ಬಂದದ್ದು ಎನ್ನುವ ವಿಷಯ secondary ಆಗಿತ್ತು.

ಇಂತಹ ವಿಕ್ಟೋರಿಯನ್ contextನಲ್ಲಿ ಕತೆಯನ್ನು ಓದುವಾಗ ಪ್ರೀತಿಯಲ್ಲಿ ಬಿದ್ದಿರುವ ಹುಡುಗ ಒಬ್ಬ ಆಕಾಶಕ್ಕೆ ಏಣಿ ಹಾಕುತ್ತಿರುವ ಪೆದ್ದನ ತರಹ ಕಾಣಿಸುತ್ತಾನೆ. ಕೊನೆಯಲ್ಲಿ ಹುಡುಗನ ಪ್ರೇಯಸಿ ಪ್ರೀತಿಯನ್ನು ತಾರ್ಕಿಕವಾಗಿ ನಿರಾಕರಿಸುತ್ತಾಳೆ. ಲೌಕಿಕ ಕಾರಣಗಳನ್ನು ನೀಡುತ್ತಾಳೆ. ನೀನು ಕೊಟ್ಟಿರುವ ಗುಲಾಬಿ ಹೂ Chamberlainನ nephew ಕೊಟ್ಟಿರುವ ಆಭರಣಗಳಿಗಿಂತ ಕ್ಷುಲ್ಲಕವಾದ್ದು ಅನ್ನುತ್ತಾಳೆ. ಆಗ ಹುಡುಗ ಎಷ್ಟು ಬೇಗ ತನ್ನ ಪರಿಸ್ಥಿತಿ, ಭಾವನಾತ್ಮಕವಾದದ್ದು ಎಂದು ಅರ್ಥ ಮಾಡಿಕೊಳ್ಳುತ್ತಾನೆಂದರೆ "ಪ್ರೀತಿಯೊಂದು ಮಿಥ್ಯ, ಅದು ಏನು ಹೇಳುವುದೋ ಅದನ್ನು ಮಾಡದು. ನಾನಿರುವುದು ವಸ್ತುನಿಷ್ಠ, ವ್ಯಾವಹಾರಿಕ ಜಗತ್ತು, ನಾನು ಇದರಲ್ಲಿ ಬದುಕಬೇಕಾದರೆ ಹಣ ಸಂಪಾದನೆಗಾಗಿ ವಿದ್ಯಾರ್ಜನೆ ಮಾಡಲೇ ಬೇಕು ಎಂದು ಧೂಳು ತುಂಬಿದ ಪುಸ್ತಕದ ರಾಶಿಯಿಂದ ಪುಸ್ತಕಗಳನ್ನು ತೆಗೆದು ಓದತೊಡಗುತ್ತಾನೆ.

ಪ್ರೀತಿ, ಪ್ರೇಮ ಸಿಗಬೇಕೆಂದರೆ ಓದಬೇಕು, ಸಾಧಿಸಬೇಕು, ಅನ್ವೇಷಿಸಬೇಕೆಂಬ ಬ್ರಿಟಿಷ್ ನಾಗರೀಕ ಮೌಲ್ಯ ಕೊನೆಗೂ ಗೆಲ್ಲುತ್ತದೆ. ಸಾಮಾನ್ಯ ಜನರ ನಡವಳಿಕೆಯನ್ನು ತನಗೆ ಬೇಕಾದ ಮೌಲ್ಯಕ್ಕೆ ತಿದ್ದಿಕೊಳ್ಳುತ್ತದೆ. ವಿಕ್ಟೋರಿಯನ್ power play ಯಲ್ಲಿ ಹಣ ಎಷ್ಟು ಪ್ರಮುಖವಾಗುತ್ತದೆ ಎಂದರೆ ಹೆಣ್ಣು ಕೂಡ ತನಗೆ ಸಿಕ್ಕಂತ proposal ಗಳಲ್ಲಿ ಹೆಚ್ಚು ಹಣವಂತನನ್ನೇ ಆರಿಸಿಕೊಳ್ಳುತ್ತಾಳೆ. ಆಕೆ ಹೇಳುತ್ತಾಳೆ, "ನಿನ್ನ ಬಳಿ Lord Chamberlain ನ ಬೂಟಿನಲ್ಲಿರುವಷ್ಟು ಬೆಳ್ಳಿಯೂ ಇಲ್ಲ". ಹಾಗಾಗಿ ಪ್ರೀತಿಯಲ್ಲಿರುವ ಹುಡುಗ ಹಾಗು ಆತನ ಪ್ರೇಯಸಿ ಇಬ್ಬರೂ ವಿಕ್ಟೋರಿಯನ್ power play ಅಥವ ಹಣದ ಆರ್ಥಿಕ ಚೌಕಟ್ಟನ್ನು ಮೀರುವುದಿಲ್ಲ. ಅವರ ಕತೆಯ ಮಾದರಿಯಿಂದ ವಿಕ್ಟೋರಿಯನ್ ಆದರ್ಶದ production ಹಾಗು circulationಗೂ ಸಹಾಯ ಮಾಡುತ್ತಾರೆ.

ಹಾಗಾಗಿ ಅಧಿಕಾರದಲ್ಲಿರುವವರು ತಮ್ಮ ಇಷ್ಟಗಳನ್ನು ಆದರ್ಶಗಳನ್ನಾಗಿ ಬದಲಾಯಿಸಿ ಸಾಮಾನ್ಯರ ಸಂಸ್ಕೃತಿಯಲ್ಲಿ ಮಿಳಿತಗೊಳಿಸಿ, ಅದನ್ನು ಮತ್ತೆ ಈ ಸಾಮಾನ್ಯ ಜನರೇ circulate ಮಾಡುವಂತೆ ಮಾಡಿ ತಮ್ಮ hegemonyಯನ್ನು ಹೇಗೆ ಮುಂದುವರೆ ಸುತ್ತಾರೆ ನೋಡಿ.ಇಲ್ಲಿ ಬರುವ ಅ) ಪಕ್ಷಿಅಥವಾ ಪ್ರಾಣಿ, ಬಿ)ಗಂಡು ಸಿ) ಹೆಣ್ಣು ಇವುಗಳ ಮುಗ್ಧತೆಯನ್ನು ಅಳತೆ ಮಾಡಿದರೆ ಪಕ್ಷಿ ಅತ್ಯಂತ ಮುಗ್ಧವಾದದ್ದು, ಎರಡನೇ ಸ್ಥಾನ ಗಂಡಿಗೆ, ಹೆಣ್ಣು ಎಲ್ಲರಿಗಿಂತ ವಸ್ತುನಿಷ್ಠ, ತಾರ್ಕಿಕ ಹಾಗು ಕ್ರೂರಿ ಕೂಡ. ಹಾಗಂತ ಹೆಣ್ಣನ್ನು ಜರಿಯಬೇಡಿ. ಇದು ಹೆಣ್ಣು ತಾನೇ ನಿರ್ಧರಿಸಿದ ತರ್ಕವಲ್ಲ. ಸಮಾಜ ನಿರ್ಮಿಸಿದ /ಹೆಣ್ಣಿನ ಮೇಲೆ ಜಾಣ್ಮೆಯಿಂದ ಹೊರಿಸಿದ ತರ್ಕ, ಹೆಣ್ಣು power ನ ಮಾಧ್ಯಮವಷ್ಟೇ.

– ಕೆ.ಬಿ.ಜ್ಯೋತಿ
jyogowdev@gmail.com



**ಪಠ್ಯ ಓದು**

## ಸಾಹಿತ್ಯದಿಂದ ಬದಲಾವಣೆ ಸಾಧ್ಯ : Andrea Hirata ನ ಜೀವನ ಕಥನ Rainbow Troops



ಇಂಡೋನೇಷಿಯಾದ ಲೇಖಕ Andrea Hirata ತನ್ನ ಕನಸು ಮನಸ್ಸಿನಲ್ಲಿಯೂ ಸಹ ತನ್ನ ಪ್ರಥಮ ಕೃತಿ Rainbow Troops ಈ ಮಟ್ಟದ ಸಂಚಲನವನ್ನು ಪ್ರಕಟವಾದ (2005) ಇಷ್ಟು ವರ್ಷಗಳ ನಂತರವೂ ಉಳಿಸಿಕೊಳ್ಳಬಹುದೆಂದು ಊಹಿಸಿರಲಿಲ್ಲ. ಈ ವರೆಗೆ ಐದು ಮಿಲಿಯನ್ ಪ್ರತಿಗಳ ಮಾರಾಟ ಕಂಡಿರುವ ಈ ಕಾದಂಬರಿ 2008 ರಲ್ಲಿ ಬೆಳ್ಳಿತೆರೆ ಯಲ್ಲಿ ಪ್ರದರ್ಶನಗೊಂಡು ಪ್ರಶಸ್ತಿಗಳ ಸರಮಾಲೆಯನ್ನೇ ಮುಡಿಗೇರಿಸಿಕೊಂಡಿದೆ. 21 ಭಾಷೆಗಳಿಗೆ ಭಾಷಾಂತರವಾಗಿರುವ ಈ ಕೃತಿ ಭಾರತವನ್ನೂ ಸೇರಿದಂತೆ 87 ರಾಷ್ಟ್ರಗಳಲ್ಲಿ ಲಭ್ಯವಾಗಿದೆ.

ದಾರಿದ್ರ್ಯದಿಂದ ಸಿರಿವಂತಿಗೆಗೆ ಏರುವ ಯಕ್ಷಿಣಿ ಕತೆಯಂತಹ ಹಂದರವನ್ನೂ, ಸ್ಫೂರ್ತಿ ತುಂಬುವ ಪಾತ್ರಗಳನ್ನೂ, ಅನಿರೀಕ್ಷಿತ ತಿರುವುಗಳನ್ನೂ ಹೊಂದಿರುವ ಈ ಕಾದಂಬರಿ Andrea Hirata ನ ವೈಯುಕ್ತಿಕ ಜೀವನ ಕತೆ. ಸುಮಾತ್ರ ದ್ವೀಪದ ಪೂರ್ವ ದಿಕ್ಕಿಗಿರುವ ಅಜ್ಞಾತ ದ್ವೀಪ Belitong ದ್ವೀಪದಲ್ಲಿ ಜನಿಸಿದ ಆಂಡ್ರಿಯಾನ ತಂದೆ ತಾಯಿ ತವರಾದ ಗಣಿಯಲ್ಲಿ ಕೂಲಿ ಕೆಲಸಗಾರರು. ಶಾಲೆಗೆ ಕಳುಹಿಸ ಲಾರದಷ್ಟು ಬಡತನ; ಇಸ್ಲಾಮಿಕ್ ಅನಾಥಾಶ್ರಮದಲ್ಲಿನ ಉಚಿತ ಶಿಕ್ಷಣವೇ ಕೊನೆಗೆ ಆಸರೆ. ಆ ಶಾಲೆಯಲ್ಲಿ ಶೌಚಾಲಯವಿಲ್ಲ, ಸೂರು ಬರೀ ನೆಪಕಷ್ಟೇ, ಮಳೆ ಗಾಲದಲ್ಲಿ ಛತ್ರಿ ಹಿಡಿದು ಪಾಠ ಕಲಿಯಬೇಕಾದ ಪರಿಸ್ಥಿತಿ. ಇಲ್ಲಿಯೇ Hirata ಮತ್ತು ಅವನ ಗೆಳೆಯರು Rainbow Troopನ ಸದಸ್ಯರಾಗಿದ್ದು. ಬಡಹುಡುಗರ (ಒಬ್ಬಳು ಹುಡುಗಿ) ಈ ಗುಂಪಿಗೆ ಶಿಕ್ಷಣದ ಸವಿಯನ್ನು ಪರಿಚಯಿಸಿದ್ದು ಇಬ್ಬರು ಬದ್ಧತೆಯುಳ್ಳ ಶಿಕ್ಷಕರು. ಪರಿಣಿತ Pak Harfan ಮತ್ತು 15 ವರ್ಷದ Ibu Muslimah.

ಆಂಡ್ರಿಯಾ ಕಠಿಣ ಶ್ರಮ ಮತ್ತು ಅದೃಷ್ಟದ ಸಹಾಯದಿಂದ ತನ್ನ ಹುಟ್ಟಿನೊಂದಿಗೇ ಬಂದ ಬಡತನದಿಂದ ತಪ್ಪಿಸಿಕೊಂಡು ಅರ್ಥಶಾಸ್ತ್ರದಲ್ಲಿ ವಿಶ್ವವಿದ್ಯಾಲಯ ಶಿಕ್ಷಣ ಪಡೆಯುವಲ್ಲಿ ಸಫಲನಾಗು ತ್ತಾನೆ. ಯೂರೋಪಿಯನ್ ಸಂಘಟನೆಯ ವಿದ್ಯಾರ್ಥಿ ವೇತನವನ್ನು ಗಳಿಸಿ ಫ್ರಾನ್ಸ್ ಮತ್ತು ಯು.ಕೆ ಯಲ್ಲಿ ಶಿಕ್ಷಣ ಮುಂದುವರೆಸುತ್ತಾನೆ. 2005ರ ಹೊತ್ತಿಗೆ Bandung ನಗರದಲ್ಲಿ ಟೆಲಿ ಸಂಪರ್ಕ ಇಲಾಖೆಯಲ್ಲಿ ಕೆಲಸಕ್ಕೆ ಸೇರುತ್ತಾನೆ. ತನ್ನ ಜೀವನಕ್ಕೆ ದೊರೆತ ದಿಕ್ಕಿನಿಂದ ಸಂತೃಪ್ತನಾದ ಆಂಡ್ರಿಯಾಗೆ ಒಂದು ದಿನ ಅವನ ಬಾಲ್ಯ ಮಿತ್ರನಿಂದ ತನಗೆ ಪ್ರೇರಕ ಶಕ್ತಿಯಾಗಿದ್ದ Ibu Muslimah ಕಾಯಿಲೆಯಿಂದ ನರಳುತ್ತಿರುವುದು ತಿಳಿಯುತ್ತದೆ. ಬಾಲ್ಯದ ನೆನಪುಗಳು ಉಮ್ಮಳಿಸಿ ಬರುತ್ತವೆ. ಐದನೇ ತರಗತಿಯಲ್ಲಿ ಇದ್ದಾಗ ತನ್ನ ಈ ನೆಚ್ಚಿನ ಶಿಕ್ಷಕಿಗೆ ತಾನು ಬರೆದ ಪುಸ್ತಕವನ್ನು ಅರ್ಪಿಸುತ್ತೇನೆ ಎಂದು ಕೊಟ್ಟ ಮಾತು ನೆನಪಾಗುತ್ತದೆ.

ಅವತ್ತೇ ರಾತ್ರಿ ಬರೆಯಲು ಪ್ರಾರಂಭಿಸಿದ Andrea Hirata ಗೆ ಅಚ್ಚರಿಯಾಗುವಂತೆ 600 ಪುಟಗಳ ನೆನಪು ದಾಖಲಾಗುತ್ತದೆ. ದಿವಾಳಿಯಾಗುವ ಸ್ಥಿತಿಯಲ್ಲಿದ್ದ Bentang ಪ್ರಕಾಶನವು ಆಂಡ್ರಿಯಾನ ಪುಸ್ತಕವನ್ನು ಮಾರಾಟವಾಗುವುದೋ ಇಲ್ಲವೋ ಎಂಬ ಅಪನಂಬಿಕೆಯಿಂದಲೇ ಪ್ರಕಟಿಸುತ್ತದೆ. ಆಂಡ್ರಿಯಾನ ಪ್ರಕಾರ ಈ ಕಾದಂಬರಿ,

"It was not urban, or cool or sexy, but about a 15 year old teacher, the kind of students who had to cycle 80 kilometres every day, to make it to school and set in a place that no one could identify on a map." ನೇರವಾಗಿ ಎದೆಯೊಳಗಿಂದ ಬಂದಂತೆ ಭಾಸವಾಗುವ 'The Rainbow Troops' ಕೆಲವೊಂದು ಕಡೆ ನಯ-ನಾಜೂಕು ಇಲ್ಲದಂತೆ ಕಂಡರೂ ಕಾದಂಬರಿಯ ಈ ಮಿತಿಯೇ ಅದರ ಭಾವನಾತ್ಮಕ ಸೆಳೆತಕ್ಕೆ ಇಂಬು ಕೊಟ್ಟಿದೆ. ಅನೇಕ ರಾಜಕೀಯ ಮತ್ತು ಸಾಮಾಜಿಕ

ವಸ್ತುಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿರುವ ಈ ಕೃತಿ ಎಲ್ಲೂ ಕೂಡ ಬೋಧನಾತ್ಮಕವಾಗದೇ ಉಳಿದಿರುವುದು ಅದರ ಹೆಗ್ಗಳಿಕೆ. ಭಾರತದಂತಹ ದೇಶದಲ್ಲಿ ಮಾತ್ರವೇ ಕಂಡುಬರುವ ಅಸಮಾನತೆ, ಕಾರ್ಪೋರೇಟ್ ದುರಾಸೆ, ಹಾಗೆಯೇ ವೈವಿಧ್ಯತೆ ಮತ್ತು ಸಮನ್ವಯಗಳನ್ನು 'The Rainbow Troops' ಪ್ರತಿಧ್ವನಿಸುತ್ತದೆ. ಬಡತನ ಮತ್ತು ಪ್ರತಿಭಾ ನಾಶದ ದುರಂತದ ನಡುವೆಯೂ ಭರವಸೆ ಮೂಡುವಂತೆ ಅರ್ಥವಾಗಿ ಬರೆಯುವ ಕಲೆ ಆಂಡ್ರಿಯಾಗೆ ಸಿದ್ಧಿಸಿದೆ. ಗಣಿತದಲ್ಲಿ ಜೀನಿಯಸ್ ಆಗಿದ್ದರೂ ಟ್ರಕ್ ಚಾಲಕನಾಗಿ ಬಾಳಬೇಕಾದ ದುರಂತಕ್ಕೆ ಸಿಲುಕಿದ ಲಿನ್ಟಾಂಗ್ ಪಾತ್ರ ಬದುಕಿನಲ್ಲಿ ಸೋತರೂ ಆಂಡ್ರಿಯಾನ ಗೆಲುವು ಅನೇಕರಿಗೆ ಗೆಲುವಾಗಿದೆ. ಒಂದು ಕಾಲದಲ್ಲಿ ದಿವಾಳಿಯಾಗುತ್ತಿದ್ದ ಅವನ ಪ್ರಕಾಶನ ಇವತ್ತು ಸೊಂಪಾಗಿ ಬೆಳೆಯುತ್ತಿದೆ. ಅವನ ಗುರು Ibu Muslimah ಶಿಕ್ಷಣ ಕ್ಷೇತ್ರಕ್ಕೆ ಅವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಇಂಡೋನೇಷಿಯಾದ ಅತ್ಯುನ್ನತ ರಾಜ್ಯ ಪುರಸ್ಕಾರ ದೊರೆತಿದೆ. 'The Rainbow Troops' ಚಲನಚಿತ್ರವಾದ ನಂತರ Belitong ದ್ವೀಪಕ್ಕೆ 1800 ಪಟ್ಟು ಪ್ರವಾಸಿಗರ ಸಂಖ್ಯೆ ಹೆಚ್ಚಳವಾಗಿದೆ. ಮತ್ತೆ ಮೂರು Sequel ಗಳನ್ನು ಬರೆದಿರುವ Andrea Hirata Financial analyst ಕೆಲಸವನ್ನು ತೊರೆದು ಪರಿಪೂರ್ಣ ಲೇಖಕನಾಗಿ ಹೊಮ್ಮಿದ್ದಾರೆ.

ಕೃಪೆ: ಪಲ್ಲವಿ ಐಯರ್ ಜೊತೆ Andrea Hirata ಸಂದರ್ಶನ ದಿ ಹಿಂದು, ಮೇ 5 2013



## ಜೀವನ ಲಹರಿ | ಪಥನದ ಹಾದಿಯಲ್ಲಿ

1960ರ ದಶಕದಲ್ಲಿ ತೆಂಗು ಬೆಳೆವ ನಾಡು ಸಂಪತ್ಭರಿತ ಕಲ್ಪವೃಕ್ಷದ ಬೀಡಾಗಿತ್ತು. ಪ್ರತಿಹಳ್ಳಿಯ ಕೆರೆಕಟ್ಟೆಗಳ ಹಿಂದಿನ ತಗ್ಗು ಪ್ರದೇಶ ಹಾಗು ಗುಡ್ಡಗಳ ಇಳಿಜಾರಿನ ಹಳ್ಳಿಗಳಲ್ಲಿ ತೆಂಗು ಬೆಳೆ ಮಳೆ ನೀರನ್ನೇ ಆಶ್ರಯಿಸಿ ಬೆಳೆಯುತ್ತಿತ್ತು. ತೆಂಗಿನ ತೋಟಗಳಲ್ಲಿ ಮಾವು, ಹಳಸು, ನೇರಳೆ, ಬೆಟ್ಟನೆಲ್ಲಿ, ಬೆಲವತ್ತ, ಚಕ್ಕೋತ, ಹುಣಸೆ, ದೇವು, ಹೊಂಗೆ, ಬಾಳೆ, ಎಳ್ಳಿ, ನಿಂಬೆ ಇತ್ಯಾದಿ ವೈವಿಧ್ಯಮಯ ಹಣ್ಣು ಹಂಪಲಿನ ಮರಗಿಡಗಳಿದ್ದವು. ಪ್ರತಿ ತೋಟದ ಸುತ್ತ ವಿವಿಧ ಗಿಡಗಳ ಹಸಿರು ಬೇಲಿ ಸಣ್ಣ ಪುಟ್ಟ ಪಶು, ಪಕ್ಷಿ, ಕ್ರಿಮಿ, ಕೀಟಗಳಿಗೆ ಆಶ್ರಯವಾಗಿತ್ತು. ಚೈತ್ರ ಮಾಸದಲ್ಲಿ ಹಸಿರು ಬೇಲಿಯಲ್ಲಿ ಅಲ್ಲಲ್ಲಿ ಜೇನು ಸಿಗುತ್ತಿತ್ತು. ಸಾಕಷ್ಟು ಮಳೆಯಾಗುತ್ತಿದ್ದರಿಂದ ಕೆರೆ ಕಟ್ಟೆಗಳಲ್ಲಿ ನೀರು ತುಂಬಿರುತ್ತಿತ್ತು. ರೈತರು ತಮ್ಮ ತಮ್ಮ ಹೊಲಗಳಲ್ಲಿ ದವಸ ಧಾನ್ಯ ಬೆಳೆದುಕೊಳ್ಳುತ್ತಿದ್ದರು. ರೈತರು ಪಶು ಸಂಗೋಪಕರಾದುದ್ದರಿಂದ ಗೊಬ್ಬರ, ಹಾಲು ಮತ್ತು ಹೈನಿಗೆ ಕೊರತೆಯಿರುತ್ತಿರಲಿಲ್ಲ. ಬೇಸಾಯಕ್ಕೆ ನೆರವಾಗುವ ವಿವಿಧ ಕಸುಬುದಾರರು ಹಳ್ಳಿಯಲ್ಲಿ ನೆಲೆಸುತ್ತಿದ್ದರು. ತಮ್ಮ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರಿಂದ ಅನ್ಯೋನ್ಯವಾಗಿ ಆರೋಗ್ಯ ವಾಗಿದ್ದರು. ಸ್ನೇಹ ಸೌಹಾರ್ದವಿತ್ತು. ಆಧುನಿಕ ಶಿಕ್ಷಣವಿಲ್ಲದಿದ್ದರು ಪರಂಪರೆಯಿಂದ ಬಂದ ಕಸುಬಿನಿಂದಲೇ ಸ್ವಾವಲಂಬಿಗಳಾಗಿದ್ದರು. ತಮ್ಮ ಮನೆಯ ಹಿಂದಿನ ಕೊಪ್ಪಲಲ್ಲಿ ತರಕಾರಿ, ಕಾಯಿಪಲ್ಲೆ ಬೆಳೆದುಕೊಳ್ಳುತ್ತಿದ್ದರು. ಇತ್ತೀಚಿಗೆ ಆಧುನಿಕತೆಯ ಹೆಸರಿನಲ್ಲಿ ರಸಾಯನ ಮಿಶ್ರಿತ ಸೋಪು, ಶ್ಯಾಂಪು, ಟೂಥ್‌ಪೇಸ್ಟ್ ಬಳಕೆಯಾಗಿ ಮನೆ ಬಳಕೆಯ ನೀರಿನಿಂದ ಯಾವ ಗಿಡ ಕೂಡ ಬೆಳೆಯುವುದಿಲ್ಲ. ಈಗಿನಷ್ಟು ಚುನಾವಣಾ ರಾಜಕಾರಣ ಅಂದು ಕಲುಷಿತವಾಗಿ ಇರಲಿಲ್ಲ. ಪ್ರತಿಯೊಂದಕ್ಕೂ ಜನ ಸರ್ಕಾರವನ್ನು ಅವಲಂಬಿಸುತ್ತಿರಲಿಲ್ಲ.

1970ರ ದಶಕದ ನಂತರ ಕೊಳವೆ ಬಾವಿಗಳು ಹಳ್ಳಿಗಾಡಿಗೆ ಬಂದವು. ಹತ್ತು ಹದಿನೈದು

ಅಡಿ ಭೂಮಿ ಬಗೆದರೆ ನೀರು ಸಿಗುತ್ತಿತ್ತು. ಕೊಳವೆ ಬಾವಿಗಳು ನೂರರಿಂದ ಇನ್ನೂರು ಅಡಿ ಆಳಕ್ಕೆ ಇಳಿದವು. ಕೊಳವೆ ಬಾವಿಗಳಲ್ಲಿ ನೀರಿದೆ ಎಂದು ದುರಾಸೆಗೆ ಬಿದ್ದ ರೈತರು ಗುಡ್ಡ. ಗೋರಣ್ಯ, ಹೊಲಗಳಲ್ಲೆಲ್ಲಾ ವಾಣಿಜ್ಯ ಬೆಳೆಗಳಾದ ತೆಂಗು ಅಡಕೆ ಬೆಳೆಯಲಾರಂಭಿಸಿದರು. ಹಿಂದೆ ಇದ್ದ ಹಣ್ಣು ಹಂಪಲುಗಳ ಮರಗಳನ್ನು ಬೆಳೆಸಲಿಲ್ಲ. ಆಧುನಿಕತೆಯ ಭ್ರಮೆಗೆ ಬಿದ್ದು ನಗರದಲ್ಲಿ ಮನೆಗಳನ್ನು ಕಟ್ಟಿಸಿಕೊಳ್ಳುವ ಉಮೇದಿನಲ್ಲಿ ಇಟ್ಟಿಗೆ ಮರಮುಟ್ಟುಗಳಿಗಾಗಿ ಮರಗಿಡಗಳು ಉರುಳಿದವು. ಆಯಕಟ್ಟಿನ ಅಧಿಕಾರದಲ್ಲಿದ್ದವರು ಹಣದ ದುರಾಸೆಗೆ ಬಿದ್ದು ಗಣಿಗಾರಿಕೆಯ ಹೆಸರಿನಲ್ಲಿ ಬೆಟ್ಟ ಗುಡ್ಡಗಳನ್ನು ದೊಗರುಗೊಳಿಸಿದರು. ವೈವಿಧ್ಯಮಯ ಹರಿದ್ವರ್ಣದ ಕಾಡನ್ನು ಬೋಳಿಸಿದರು. ವಾಹನಗಳ ಹೆಚ್ಚಳವೂ ಇದಕ್ಕೆ ಸೇರಿ ಹವಾಗುಣದ ವೈಪರಿತ್ಯದ ಪರಿಣಾಮ ವಾತಾವರಣ ಸಮತೋಲನ ಕಳೆದುಕೊಂಡಿತು. ಮಳೆ ಕ್ರಮಬದ್ಧವಾಗಿ ಆಗುತ್ತಿಲ್ಲ. ಅತಿವೃಷ್ಟಿ ಮತ್ತು ಅನಾವೃಷ್ಟಿಯ ಪರಿಣಾಮಗಳನ್ನು ಕಾಣುತ್ತಿದ್ದೇವೆ.

ಅತಿಯಾದರೂ ಅಮೃತ ವಿಷವಾಗುವಂತೆ ತೆಂಗು ಬೆಳೆ ಪ್ರದೇಶದ ರೈತರು 900 ಅಡಿಯಿಂದ 1000 ಅಡಿಯ ವರೆಗೆ ಕೊಳವೆ ಬಾವಿಗಳನ್ನು ಕೊರೆಸುತ್ತಿದ್ದಾರೆ. ಸಾವಿರಾರು ವರ್ಷಗಳಿಂದ ಶೇಖರವಾಗಿದ್ದ ಅಂತರ್ಜಲ ಖಾಲಿಯಾಗುತ್ತಿದೆ. ಸಾವಿರಾರು ಅಡಿ ಕೊರೆದ ಕೊಳವೆ ಬಾವಿಗಳಲ್ಲಿ ಒಂದೆರಡು ಇಂಚು ನೀರು ಸಿಕ್ಕರೂ ಕೆಲವೇ ತಿಂಗಳುಗಳಲ್ಲಿ ಬತ್ತುತ್ತಿದೆ. ಅತಿ ಆಳದ ನೀರು ರಸಾಯನಿಕ ಹಾಗು ಲೋಹಾಂಶ ಮಿಶ್ರಣವಾದುದ್ದ ರಿಂದ ಆರೋಗ್ಯದ ಮೇಲೆ ವಿಪರೀತ ಪರಿಣಾಮ ಉಂಟುಮಾಡುತ್ತದೆ. ಜೊತೆಗೆ ತೆಂಗಿಗೆ ನೀರಿನ ಕೊರತೆ ಹಾಗು ಮಿತಿಮೀರಿದ ರಸಾಯನಿಕ ಗೊಬ್ಬರ ಬಳಸಿದ ಪರಿಣಾಮ ನುಸಿ ಪೀಡೆ, ರಸ ಒಸರುವ ರೋಗ, ಕಪ್ಪು ತಲೆಹುಳು, ಗರಿ ಒಣಗುವ ರೋಗದ ಪರಿಣಾಮ ಲಕ್ಷಾಂತರ ತೆಂಗಿನ ಮರಗಳು ನಾಶವಾಗಿವೆ. ಈಗಾಗಲೇ ಶೇಕಡ 70ರಷ್ಟು ಬೆಳೆ ನಾಶವಾಗಿದೆ. ತೆಂಗಿನ ನಡುವೆಅಡಿಕೆ ಬೆಳೆದ ಪರಿಣಾಮ ಶೇಕಡ 90ರಷ್ಟು ಬೆಳೆ ನಾಶವಾಗಿದೆ. ರೈತರು ನೆಲಕಚ್ಚಿದ್ದಾರೆ. ಹಳ್ಳಿಗಳು ನಾಶವಾಗುತ್ತಿವೆ. ಯುವಕ-ಯುವತಿಯರು ಕೆಟ್ಟು-ಪಟ್ಟಣ ಸೇರುತ್ತಿದ್ದಾರೆ. ಮುದುಕ-ಮುದುಕಿಯರು ರೋಗಿಷ್ಟರು ಮಾತ್ರ ಹಳ್ಳಿಗಳಲ್ಲಿದ್ದಾರೆ. ದುಡಿಯುವ ಕೈಗಳಿಲ್ಲ, ಕಾಲಕಾಲಕ್ಕೆ ಮಳೆಬೆಳೆಗಳಿಲ್ಲ. ಗಾಂಧೀಜಿ ಕನಸಿನ ಗ್ರಾಮ ಸ್ವರಾಜ್ಯ ಸ್ಮಶಾನ ರಾಜ್ಯವಾಗಿದೆ.

ಗಾಯದ ಮೇಲೆ ಬರೆ ಎಳೆಯುವಂತೆ ಸೋಮಾರಿಗಳಿಗೆ ಗುಡಿಸಿ ಹಾಸಿಕೊಟ್ಟಂತೆ ವಿಜ್ಞಾನ ಸೌಲಭ್ಯವನ್ನು ಜವಾಬ್ದಾರಿ, ಪ್ರಜ್ಞೆ, ವಿವೇಕದಿಂದ ಬಳಸದೆ ಸ್ವಹಿತಾಸಕ್ತಿಗೆ ಬಳಸಿಕೊಳ್ಳುತ್ತಿರುವವರು ಹೆಚ್ಚುತ್ತಿದ್ದಾರೆ. ಟಿ.ವಿ ಮತ್ತಿತರ ಸಮೂಹ ಮಾಧ್ಯಮಗಳು ಮನರಂಜನೆಯ ಹೆಸರಿನಲ್ಲಿ ಅವಾಸ್ತವ ಮತ್ತು ಕೃತಕ ಜೀವನದ ಭ್ರಮೆ ಬಿತ್ತುತ್ತಿದ್ದಾರೆ. ಪೂಜೆ, ಪುನಸ್ಕಾರ, ಪವಾಡ, ಮಹಿಮೆ, ಅವತಾರ, ಜನ್ಮಾಂತರ, ವಾಸ್ತು, ಜ್ಯೋತಿಷ್ಯ ಇತ್ಯಾದಿಗಳ ಅವೈಜ್ಞಾನಿಕ ವಿಚಾರಗಳನ್ನು ಪ್ರಚುರಪಡಿಸುತ್ತಿದ್ದಾರೆ. ಸ್ವಹಿತಾಸಕ್ತಿಯ ರಾಜಕಾರಣ ಜನರನ್ನು ಸೋಮಾರಿಗಳು ಹಾಗು ಭಿಕ್ಷುಕರನ್ನಾಗಿಸುತ್ತಿದೆ. ಒಂದು ದೇಶ ಹಾಳಾಗ ಬೇಕಾದರೆ ಅಲ್ಲಿನ ಜನರಿಗೆ ದೈಹಿಕ ಶ್ರಮ ತಪ್ಪಿಸಿ ದುರಾಭ್ಯಾಸ ಹಾಗು ಭ್ರಮಿತ ಕನಸಿನ ಲೋಕದಲ್ಲಿ ವಿಹರಿಸುವುದನ್ನು ಕಲಿಸಿದರೆ ಸಾಕು. ಆಗ ಆ ದೇಶ ತನಗೆ ತಾನೆ ನಾಶವಾಗುತ್ತದೆ. ಇಂದು ಅನಿವಾರ್ಯವಾಗಿ ನಾವು 2600 ವರ್ಷಗಳ ಹಿಂದೆ ಬುದ್ಧ ಹೇಳಿದ ಮಾತನ್ನು ಅನುಸರಿಸಲೇ ಬೇಕು, "ಭೂಮಿಯನ್ನು ದೊಗರುಗೊಳಿಸಬೇಡಿ, ಗಿಡಮರಗಳನ್ನು ಕಡಿಯಬೇಡಿ, ಜೋತಿಷ್ಯ ನಂಬಬೇಡಿ, ವೈದ್ಯಕೀಯ ಅವಲಂಬಿಸಬೇಡಿ, ನಿಮಗೆ ನೀವೇ ಜವಾಬ್ದಾರರಾಗಿ". ಪ್ರಕೃತಿ ಮತ್ತು ಪರಿಸರವನ್ನು ದುರುಪಯೋಗಪಡಿಸಿಕೊಳ್ಳಬಾರದು. ಅವುಗಳನ್ನು ಸರಿಯಾಗಿ ಅರಿತು ಪ್ರಜ್ಞಾವಂತರಾಗಿ ಅಳವಡಿಸಿ ಕೊಂಡರೆ ನಾವು ಉಳಿಯುತ್ತೇವೆ ಇಲ್ಲದಿದ್ದರೆ?

**-ಕೆ.ಆರ್. ಬಸವರಾಜು**



# ಪ್ರಾಚೀನ ಭಾರತದ ಸ್ತ್ರೀ ಸಾಹಿತ್ಯ : ಪೌರಸ್ತ್ಯ ನೆಲೆಯ ವಿರುದ್ಧ ಓದು

[ಯೂರೋ-ಅಮೇರಿಕನ್ ಸ್ತ್ರೀವಾದಿ ಸಿದ್ಧಾಂತಗಳು ಪಿತೃಪ್ರಧಾನ ತುರ್ತುಗಳನ್ನು ತೆರೆದಿಡಲು ಹೆಚ್ಚು ಗಮನಹರಿಸುತ್ತವೆ. ಪಿತೃಪ್ರಧಾನತೆಯು ತಾನೇತಾನದ ವ್ಯವಸ್ಥೆಯಾಗಿ ಮಹಿಳೆಯರ ಅಧೀನತೆಗೆ ಕಾರಣವಾಗಿದೆ ಎನ್ನುವ ಪಾಶ್ಚಾತ್ಯರ ವಿವರಣೆಯನ್ನು ಪ್ರಶ್ನಿಸುತ್ತಲೇ ಪಿತೃಪ್ರಧಾನತೆಯನ್ನು ಪೊರೆಯಲು ವಸಾಹಾತುಶಾಹಿ, ಜಾತಿ ಮತ್ತು ವರ್ಗ, ಶಕ್ತಿ ಕೇಂದ್ರಗಳು ಪೂರಕವಾಗಿ ಕೆಲಸ ಮಾಡುತ್ತವೆ ಮತ್ತು ಪಿತೃಪ್ರಧಾನತೆಯಿಂದ ಪುನರ್ ರಚಿಸಲ್ಪಡುತ್ತವೆ ಎಂಬುದನ್ನು ರುಜುವಾತು ಪಡಿಸುವುದು ಭಾರತೀಯ ಸ್ತ್ರೀ ಚಿಂತನೆಯ ಪ್ರಮುಖ ಆಲೋಚ್ಯ ವಿಷಯವಾಗಿದೆ.

ಸ್ತ್ರೀವಾದಿ ಅಧ್ಯಯನಗಳು ಭಾರತೀಯ ಪೌರಸ್ತ್ಯರನ್ನು (Indologists), ಭಾರತದಲ್ಲಿನ ಅವರ ತೀವ್ರ ವಿರೋಧಿಗಳನ್ನು (Utilitarians) ಪೌರಸ್ತ್ಯರೆಂದೇ (Orientalists) ಭಾವಿಸುತ್ತದೆ, ಏಕೆಂದರೆ ಮಹಿಳೆಯರ ವಿರೋಧವಾಗಿ ಅವರು ಮೈಗೂಡಿಸಿಕೊಂಡ ಹಾಗು ಅಧಿಕಾರ ಹಿಡಿಯಲು ಕಟ್ಟಿಕೊಂಡ ಮಾದರಿಗಳು ಏಕ ಪ್ರಕಾರವಾಗಿವೆ.

ವಸಾಹಾತು ಪೂರ್ವ ಕಾಲದಲ್ಲಿ ದೊರೆತಿರುವ ಅಚ್ಚರಿ ಹುಟ್ಟಿಸುವ ವೈವಿಧ್ಯಮಯ ಸ್ತ್ರೀ ಸಾಹಿತ್ಯವು ಗಂಭೀರವಾದ ಸಂಶೋಧನೆಗೆ ಒಳಪಡದೆ ನಿರ್ಲಕ್ಷ್ಯವಾಗಿರುವ ಸಂಗತಿಯನ್ನು ತೆರೆದಿಡುವ ಸಲುವಾಗಿ ಸೂಸಿ ಥಾರು ಮತ್ತು ಕೆ.ಲಲಿತ ತಮ್ಮ "Women Writing in India" Vol-I & Vol-II (600 BC to the Early Twentieth Century) ಸಂಕಲನಗಳಲ್ಲಿ ಈ ಮಹಿಳೆಯರ ಸಾಹಿತ್ಯ ಶ್ರೇಷ್ಠತೆಯನ್ನು ಅಭಿವ್ಯಕ್ತ ಪಡಿಸುವ ಕೃತಿಗಳನ್ನು ಕಲೆಹಾಕಿದ್ದಾರೆ. ಈ ವಸಾಹಾತು ಪೂರ್ವ ಮಹಿಳೆಯರ ಸಾಹಿತ್ಯ ರಚನೆಯನ್ನು ಸ್ತ್ರೀ ವಾದಿ ನೆಲೆಯಿಂದ ಪರಿಗಣಿಸಿರುವುದರಿಂದ ಗತಕಾಲದ ಕುರಿತು ಪ್ರಚಲಿತ ಇರುವ ಪ್ರಬಲ ಪ್ರತಿನಿಧಿತ್ವಗಳನ್ನು ಪ್ರಶ್ನಿಸಲು ಅನುಕೂಲವಾಗಿದೆ. ಪ್ರಾಚೀನ ಕಾಲದ ಮಹಿಳಾ ಸಾಹಿತ್ಯಕ್ಕೆ ಸೂಸಿ ಥಾರು ಮತ್ತು ಕೆ.ಲಲಿತ ಬರೆದಿರುವ ಮುನ್ನುಡಿಯ ಅನುವಾದ ಈ ಲೇಖನ.]

## I

ಪ್ರಾಚೀನ ಬುದ್ಧರ ಕಾಲದ ನಂತರದ ಸ್ತ್ರೀ ಸಾಹಿತ್ಯ 17/18 ನೇ ಶತಮಾನದ ಆಸ್ಥಾನ ಸಾಹಿತ್ಯ ಬರುವವರೆಗೂ ಮೌಖಿಕವಾಗಿ ದಾಖಲಾಗುತ್ತಾ ಬಂದಿತ್ತು. ಪ್ರಾಚೀನ ಸಾಹಿತ್ಯದ ಹಿನ್ನಲೆಯಲ್ಲಿ ವಾಸ್ತವವನ್ನು ಅರಿಯುವ ಕ್ರಮ ಓರಿಯಂಟಲ್ ಓದುಗಳ ಕೊಡುಗೆ. 19 ಮತ್ತು 20ನೇ ಶತಮಾನದಲ್ಲಿ ಪ್ರಮುಖವಾಗಿ ಗತಕಾಲ ಮತ್ತು ಪರಂಪರೆಗಳು ಇತಿಹಾಸಜ್ಞರು ಮತ್ತು ಸಾಹಿತ್ಯ ವಿದ್ಯಾರ್ಥಿಗಳ ನಡುವೆ ಮಾತ್ರವಲ್ಲದೇ ಕಲಾವಿದರು, ಕಾದಂಬರಿಕಾರರು, ರಾಜಕೀಯ ತತ್ವಜ್ಞಾನಿಗಳು, ಸಮಾಜ ಸುಧಾರಕರು, ಸಾಮ್ರಾಜ್ಯಶಾಹಿ ಆಡಳಿತಗಾರರು, ನೀತಿ/ನಿಯಮಗಳನ್ನು ರೂಪಿಸುವವರು ಮತ್ತು ರಾಷ್ಟ್ರೀಯ ಚಿಂತಕರ ವಲಯದಲ್ಲಿ ತೀವ್ರವಾದ ಚರ್ಚೆಗೆ ಒಳಪಟ್ಟಿದ್ದವು. ಪ್ರಾಚೀನ ಇತಿಹಾಸವನ್ನು ಅರ್ಥೈಸಿಕೊಳ್ಳುವುದು ಭಾರತ ಉಪಖಂಡದ ನಂತರದ ಸ್ಥಿತಿ ಮತ್ತು ಸಮಕಾಲೀನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಬೇಕಾದ ಕೀಲಿಕೈ ಎಂದೇ ಭಾವಿಸಲಾಗಿತ್ತು.

ವೈದಿಕ ಕಾಲವು ಭಾರತದ ಇತಿಹಾಸವನ್ನು ಎಷ್ಟರ ಮಟ್ಟಿಗೆ ಪ್ರಭಾವಿಸಿದೆ ಎಂದರೆ ಭಾರತದ ಧರ್ಮ, ನೈತಿಕತೆ ಮತ್ತು ಸಾಹಿತ್ಯವನ್ನು 'ಸರಿ'ಯಾದ ದೃಷ್ಟಿಕೋನದಿಂದ ತೀರ್ಮಾನಿಸಲು ವೈದಿಕ ಕಾಲದ ಪಳೆಯುಳಿಕೆಯಂತಿರುವ ಸಾಹಿತ್ಯದ ತಿಳುವಳಿಕೆ ತೀರಾ ಅಗತ್ಯ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಹುಟ್ಟಿನಲ್ಲಿ ಭಾರತೀಯರಾದರೂ ಪೌರಸ್ತ್ಯ ನಿಲುವನ್ನು ಸಮರ್ಥಿಸುತಿದ್ದ ಇಂಡಾಲಜಿಸ್ಟ್‌ಗಳು ಸಂಸ್ಕೃತಕ್ಕೂ ಮತ್ತು ಕ್ಲಾಸಿಕಲ್ ಭಾಷೆಗಳಾದ ಗ್ರೀಕ್ ಮತ್ತು ಲ್ಯಾಟಿನ್‌ಗೆ ಸಾಮ್ಯತೆಯನ್ನು ಹುಡುಕುತ್ತಿದ್ದರು; ತಮ್ಮನ್ನು ತಾವು ಇಂಡೋ-ಯೂರೋಪಿಯನ್ನರೆಂದು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಆರ್ಯನ್ ಮತ್ತು ದ್ರಾವಿಡಿಯನ್ ಭಾಷೆಗಳ ನಡುವೆ ಭಿನ್ನತೆಯನ್ನು ಕಾಯ್ದಿಡುತ್ತಿದ್ದರು.

ಹಾಗೆಯೇ ಪೌರಸ್ತ್ಯರ (ಓರಿಯಂಟಲಿಸ್ಟರು) ಪ್ರಕಾರ ವೇದ ಕಾಲದ ಸ್ವರ್ಗ ಸಮನಾದ ಗ್ರಾಮ

ಸಮುದಾಯಗಳು ಮಾನವರ ಸಹಜ ಸ್ವಭಾವಗಳಾದ ಸೌಮ್ಯತೆ, ಸತ್ಯಸಂಧತೆ ಮತ್ತು ಅಲೌಕಿಕತೆಯನ್ನು ಸಿದ್ಧಿಸಿಕೊಂಡಿದ್ದವು. "ಯೂರೋಪ್ ಮೇಲ್ಮಟ್ಟದ ರೂಮ್ಯಾಂಟಿಸಮ್ ಗಾಗಿ ಹುಡುಕಬೇಕು" ಎಂದು ಕವಿ August Schlegel ಉದ್ಗರಿಸುತ್ತಾನೆ. ಪೌರಾಸ್ತ್ಯರ ರೊಮ್ಯಾಂಟಿಕ್ ಕಲ್ಪನೆಯಲ್ಲಿ ವೇದ ಕಾಲದ ಭಾರತವು ಮಹತ್ತಾದ ಆದರ್ಶ ವ್ಯವಸ್ಥೆ, ಒಂದು ಯುಟೋಪಿಯ. ಮ್ಯಾಕ್ಸ್‌ಮುಲ್ಲರ್ ಕೂಡ "ಪ್ರಾಪಂಚಿಕ, ಭೋಗಾಸಕ್ತವಾದ ಯೂರೋಪಿನಂತಲ್ಲದೆ ವೇದ ಕಾಲದ ಭಾರತವು ನಿವೃತ್ತ ಭಾವದ, ಧ್ಯಾನಸ್ತ ಹಾಗು ತಾತ್ವಿಕವಾಗಿತ್ತು" ಎಂದು ಅಭಿಪ್ರಾಯಪಡುತ್ತಾನೆ.

ವೇದಕಾಲದ ಮಹಿಳೆಯರಲ್ಲಿದ್ದ ಧಾರ್ಮಿಕತೆ, ವಿರಕ್ತತೆಯ ಕೋಮಲತೆ, ಸ್ವಾರ್ಥ ನಿರಾಕರಣ, ಕುಟುಂಬದ ಕುರಿತ ಅಮಿತ ನಿಷ್ಠೆಯನ್ನು ನೋಡಿ ಪಾಶ್ಚಾತ್ಯ ಮಹಿಳೆಯರು ಕಲಿಯಬೇಕೆಂದು Clarisse Bader ವಾದಿಸುತ್ತಾಳೆ. ಸತಿಯಾಗಲು ತಮ್ಮ ಗಂಡಂದಿರ ಚಿತೆಯನ್ನು ಏರುವಾಗ ಈ ಮಹಿಳೆಯರು ತೋರುವ ಆತ್ಮಸ್ಥೈರ್ಯವನ್ನು ಅಚ್ಚರಿಯಿಂದ ಹೊಗಳುತ್ತಾಳೆ. ಭಾರತೀಯ ಮಹಿಳೆಯರ ಇಂದಿನ ದುರ್ಗತಿಗೆ ವೈದಿಕ ನಂಬಿಕೆ ಮತ್ತು ಆಚರಣೆಗಳಿಗೆ ಆದ ನಂತರದ ಸೇರ್ಪಡೆಗಳು ಹಾಗು ನೈತಿಕ(Sensuous) ವೈಷ್ಣವ ಪಂಥಗಳ ಉಗಮ ಕಾರಣವೆನ್ನುತ್ತಾಳೆ. "ಕರ್ತವ್ಯದ ನೊಗವನ್ನು ಭಾವೋದ್ರೇಕ (Passion) ಕ್ಕೆ ಬದಲಾಯಿಸಿಕೊಂಡ ಕೂಡಲೆ ಪ್ರತಿಭಾನ್ವಿತರಾದ ಈ ಜನರು ಯಾವ ಮಟ್ಟದ ಭೌತಿಕ ಹಾಗು ನೈತಿಕ ಅಧಃಪತನವನ್ನು ಕಂಡರು" ಎಂಬ ಪಾಠವನ್ನು ಯೂರೋಪ್ ವೇದ ಕಾಲದ ಸಮಾಜದ ನಾಶವನ್ನು ನೋಡಿ ಕಲಿಯಬೇಕೆನ್ನುತ್ತಾಳೆ.

ಮುಲ್ಲರ್ ಮತ್ತು ರೊಮ್ಯಾಂಟಿಸ್ಟ್‌ರಿಗೆ ಭಿನ್ನವಾಗಿ ಜೇಮ್ಸ್ ಮಿಲ್ ಭಾರತೀಯ ಸಂಸ್ಕೃತಿಯು ಮೂಲಾವಸ್ಥೆಯ, ನೀತಿಗೆಟ್ಟ ಮತ್ತು ಒರಟಾಗಿದ್ದು ನಾಗರೀಕ ಸಮಾಜಕ್ಕೆ ಅವಶ್ಯಕವಾದ ವಿವೇಚನೆ ಮತ್ತು ಉತ್ತಮ ಗುಣಮಟ್ಟದ ಸರ್ಕಾರವನ್ನು ಹೊಂದಿರಲಿಲ್ಲ ಎಂದು ಅಭಿಪ್ರಾಯ ಪಡುತ್ತಾನೆ. ಅವರ ಕಲ್ಪನೆಯು ಉನ್ಮತ್ತವಾದದ್ದು, ವ್ಯವಸ್ಥೆಗೆ ಒಳಪಡದ್ದು, ಅವರ ಕಲ್ಪಿತ ಕಥನಗಳು ದುರ್ವಿನೀತ, ಅಸಹಜ ಮತ್ತು ಬೀಭತ್ಸ. ಜೇಮ್ಸ್ ಮಿಲ್ ಪ್ರಕಾರ ಯಾವುದೇ ನಾಗರೀಕತೆಯ ಔನ್ನತ್ಯವಿರುವುದು ಸ್ತ್ರೀಯರಿಗೆ ನೀಡಿರುವ ಸ್ಥಾನ ಮಾನದ ಅವಲೋಕನದಲ್ಲಿ.

"ಇವರ ಯಾವುದೇ ಕಾನೂನು ಪುಸ್ತಕಗಳಲ್ಲಿ ಮಹಿಳೆಯರ ಉಲ್ಲೇಖವಿಲ್ಲ, ಕೇವಲ ಹತಭಾಗ್ಯರಾಗಿ ಅಯೋಗ್ಯವಾದ ಕೆಡುಕಿನ ಉದ್ದೇಶವುಳ್ಳವರಾಗಿ, ಉಪಯುಕ್ತವಾದ, ಒಳ್ಳೆಯ ಗುಣಗಳನ್ನೇನನ್ನೂ ಹೊಂದದೆ ದಾಖಲಾಗಿದ್ದಾರೆ." ಎಂದು ಮಿಲ್ ಬರೆಯುತ್ತಾನೆ. 19ನೇ ಶತಮಾನದ ಪತ್ರಿಕೆಗಳಲ್ಲಿ, ಪ್ರವಾಸಿ ಕಥನಗಳಲ್ಲಿ, ಸಾಹಿತ್ಯದಲ್ಲಿ ಅಲ್ಲದೇ ಬ್ರಿಟಿಷ್ ರಾಜಕಾರಣಿಗಳಲ್ಲಿ ಹಾಗು ಆಡಳಿತಗಾರ ಅಭಿಪ್ರಾಯಗಳಲ್ಲಿ ಜೇಮ್ಸ್ ಮಿಲ್ ನ ಗಮನಿಸುವಿಕೆಗಳು ಪ್ರತಿಬಿಂಬಿತವಾಗಿವೆ.

ಪಾಶ್ಚಾತ್ಯರ ಕಲ್ಪನೆಯಲ್ಲಿ ಭಾರತವೆಂದರೆ ಚಿತೆಯೇರುತ್ತಿರುವ ಸತಿ ಮತ್ತು ಬಾಲ ವಧು ಎಂದು ಸಮೀಕರಿಸಲಾಗಿತ್ತು. 1927ರಲ್ಲಿ Katherine Mayo ಬರೆದ 'ಮದರ್ ಇಂಡಿಯಾ' ಕಾದಂಬರಿಯಲ್ಲಿ ಭಾರತೀಯ ಪುರುಷರ ಕಾಮಾತಿರೇಕಗಳನ್ನು ಹಾಗು ಅವರ ಬಾಲವಧುಗಳ ಭೀಕರ ನರಳುವಿಕೆಯನ್ನು ವಿವರವಾಗಿ, ಕೋಪೋದ್ರಿಕ್ತವಾಗಿ ದಾಖಲಿಸಲಾಗಿದೆ.ಈ ಕೃತಿಯಲ್ಲಿ ಕಂಡು ಬರುವ ಲಂಪಟತನದ ಉದ್ದೀಪನೆ ಮತ್ತು ನೈತಿಕತೆಯ ಕೆರಳುವಿಕೆಯು ಭಾರತೀಯ ಮಹಿಳೆಗೆ ಯಾವುದೇ ಅನುಕೂಲವಾಗದಿದ್ದರೂ ಭಾರತದ ಬಗ್ಗೆ ಪಾಶ್ಚಾತ್ಯರಿಗಿದ್ದ ಕೆಳಮಟ್ಟದ ಕಲ್ಪನೆಯನ್ನು ಮತ್ತಷ್ಟು ಪೋಷಿಸಿದವು. ರಾಷ್ಟ್ರೀಯ ಚಳುವಳಿಯ ಉಚ್ಛ್ರಾಯ ಸ್ಥಿತಿಯ ಕಾಲದಲ್ಲಿ ಪ್ರಕಟವಾದ ಈ ಕೃತಿಯನ್ನು ಬ್ರಿಟಿಷರು ಉತ್ಸಾಹದಿಂದಲೇ ಪ್ರಚಾರಮಾಡಿದರು. ವಿಮರ್ಶಕರೊಬ್ಬರ ಪ್ರಕಾರ ಮೇಯೋಳ ಪುಸ್ತಕವು ಸ್ವರಾಜ್ಯ (ಸ್ವ-ಸರ್ಕಾರ)ದ ಬೇಡಿಕೆಯನ್ನು ಅರ್ಥಹೀನ ವನ್ನಾಗಿಸಿತು ಮತ್ತು ಸ್ವರಾಜ್ಯವನ್ನು ನೀಡುವ ಇಚ್ಛೆ ತೋರುವುದೂ ಸಹ ಅಪರಾಧವೆಂಬಂತೆ ಬಿಂಬಿಸಿತು.

ಸಮಕಾಲೀನ ಭಾರತದಲ್ಲಿ ನೆಲೆಸಿದ್ದ ವಿಷಣ್ಣತೆಯು 3,000 ವರ್ಷಗಳಿಂದಲೂ ಯಾವುದೇ ಗಮನಾರ್ಹ ಬದಲಾವಣೆಗಳಿಗೆ ಒಳಪಡದೆ ದೃಢವಾಗುತ್ತಲೇ ಸಾಗಿ ಬಂದಿದೆ ಎಂದ ಮಿಲ್‌ನ ಅಭಿಪ್ರಾಯಗಳನ್ನು ಧರ್ಮ ಪ್ರಚಾರಕರೂ ಸಹ ಅನುಮೋದಿಸಿದರು.

ವೈಚಾರಿಕ ಧರ್ಮ(ಕ್ರಿಸ್ತ ಧರ್ಮ) ವನ್ನು ಹೊರತು ಪಡಿಸಿ ಯಾವುದೇ ಶಾಸನಗಳಾಗಲೀ, ಉತ್ತಮ ಸರ್ಕಾರಗಳಾಗಲೀ ಭಾರತದಲ್ಲಿ ಸರ್ವವ್ಯಾಪಕವಾಗಿದ್ದ ಮೂಢ ನಂಬಿಕೆಗಳನ್ನಾಗಲೀ, ಭಾರತೀಯರ ಮನೋಧರ್ಮವನ್ನಾಗಲೀ ಬದಲಾಯಿಸಲು ಸಾಧ್ಯವಿಲ್ಲ ಎಂದು ಮತಬೋಧಕರು ನಂಬಿದ್ದರು.

ರಾಷ್ಟ್ರವಾದಿ ಅಧ್ಯಯನಗಳು ಈ ಐತಿಹಾಸಿಕ ಪೂರ್ವಾಗ್ರಹಗಳು ಸಾಮ್ರಾಜ್ಯವಾದಿ ಧೋರಣೆಗಳನ್ನು ಈಡೇರಿಸಲು ಅವಶ್ಯಕವಾಗಿ ಬೇಕಾಗಿವೆ ಎಂಬ ಸತ್ಯವನ್ನು ಅರಿತು ಅವರ ತಂತ್ರಗಳನ್ನು ಬಯಲಿಗೆಳೆಯಲು ಪ್ರಯತ್ನಿಸಿದವು. ಮಹಿಳಾ ಪ್ರಶ್ನೆಯು ಬ್ರಿಟಿಷ್ ಮತ್ತು ಭಾರತೀಯ ಪಿತೃಪ್ರಧಾನ ವ್ಯವಸ್ಥೆಗಳನ್ನು ಎದುರ-ಎದುರ ನಿಲ್ಲಿಸಿತು.

ಭಾರತದ ಬಗ್ಗೆ ಕಟ್ಟಲಾದ ಮಿಲ್ ನ ರಚನೆಗಳನ್ನು ಕಾದಂಬರಿಕಾರ, ಇತಿಹಾಸಜ್ಞ ಆರ್. ಸಿ ದತ್ ತಮ್ಮ "History of Civilisation in Ancient India" ದಲ್ಲಿ ತೀವ್ರವಾಗಿ ವಿರೋಧಿಸಿದರು. ಅವರ ಪ್ರಕಾರ ಹಿಂದು ಸ್ತ್ರೀತ್ವ ದ ಉನ್ನತ ಸಂಕೇತವಾಗಿ ವೈದಿಕ ಮಹಿಳೆಯು ಸ್ಥಾಪಿತವಾಗಿದ್ದಾಳೆ. 1938 ರಲ್ಲಿ A.S. Altekar ತಮ್ಮ Position of Women in Hindu Civilisation ಕೃತಿಯಲ್ಲಿ "ಮಹಿಳೆಯರು ಅತ್ಯುನ್ನತ ಸ್ವಾತಂತ್ರವನ್ನು ವೇದ ಕಾಲದಲ್ಲಿ ಹೊಂದಿದ್ದರು; ಹಾಗೆಯೇ ತಮ್ಮ ಗೌರವವನ್ನು ಮುಸ್ಲಿಂರ ಧಾಳಿಯಲ್ಲಿ ಕಳೆದುಕೊಂಡರು" ಎಂದು ಮರು ರಚಿಸಿದರು. ಪರಕೀಯರ ಸತತ ಧಾಳಿಗೆ ಸಿಕ್ಕ ಭಾರತಕ್ಕೆ ಇತಿಹಾಸವೇ ಇಲ್ಲ, ಯಾಕೆಂದರೆ ಕ್ರೂರ ರಾಜರ ಆಳ್ವಿಕೆಯಲ್ಲಿನ ನಿರಂಕುಶ ಪ್ರಭುತ್ವವು ಸಮಾಜವನ್ನು ಬೆಳೆಯಲಿಕ್ಕೆ ಅವಕಾಶ ನೀಡಲಿಲ್ಲ, ಈ ಸಮಾಜವು ಯೂರೋಪ್ ನಂತೆ ಬೆಳೆದ ನಾಗರೀಕತೆ ಅಲ್ಲ ಎನ್ನುತ್ತಾನೆ ಜೇಮ್ಸ್ ಮಿಲ್. ಸಾರಾಸಗಟಾಗಿ ಭಾರತಕ್ಕೆ ಇತಿಹಾಸವೇ ಇಲ್ಲ ಎನ್ನುವ ಮಿಲ್ ನ ಹೇಳಿಕೆಯು ಸಾವಿರಾರು ವರ್ಷಗಳ ಕಾಲಘಟ್ಟದಲ್ಲಿ ನಡೆದ ಅಗಣಿತ ಭೌಗೋಳಿಕ, ಆರ್ಥಿಕ, ರಾಜಕೀಯ, ಮತ್ತು ಸಾಂಸ್ಕೃತಿಕ ಬದಲಾವಣೆಗಳು ಮತ್ತು ಅವನ್ನು ಹಿಡಿದಿಟ್ಟ ಸಾಹಿತ್ಯವನ್ನು ಕೂಡ ಭೂಗತ ಮಾಡಿಬಿಟ್ಟಿತು.

ಈ ಘನೀಕರಣವು ಎಷ್ಟರ ಮಟ್ಟಿಗೆ ಪರಿಪೂರ್ಣವೂ, ರಾಜಿಗೆ ಒಳಪಡದೆಯೂ ಇತ್ತೆಂದರೆ ಕೇವಲ ಇತ್ತೀಚಿಗೆ ಅಂದರೆ 19ನೇ ಶತಮಾನದ ಕೊನೆಯ ಭಾಗದಲ್ಲಿ ಎಂ.ಜಿ. ರಾನಡೆ ತಮ್ಮ ಕೃತಿಗಳಲ್ಲಿ ಮಧ್ಯಯುಗದ ಭಕ್ತಿ ಚಳುವಳಿಗಳನ್ನು ಚರ್ಚೆಗೆ ಎತ್ತಿಕೊಂಡರು. ಹಿಂಜರಿಯುತ್ತಲೇ ರಾನಡೆ ಮತ್ತು ಅವರ ಸಹಚರರು ಭಕ್ತಿ ಚಳುವಳಿಗಳನ್ನು ಯೂರೋಪಿನ ಧರ್ಮ ಸುಧಾರಣಾ ಚಳುವಳಿಗಳಿಗೆ (Protestant) ಹೋಲಿಸಿದರು.

ಭಾರತಕ್ಕೆ ಇತಿಹಾಸ ನಿರಾಕರಣೆಯಷ್ಟೇ ಮುಖ್ಯವಾದದ್ದು, ಭಾರತೀಯ ನಾಗರೀಕತೆಯ ಕೇಂದ್ರ ಬಿಂದುವಾಗಿ ಸ್ಥಾಪಿತನಾದ ಆರ್ಯ ಪುರುಷ. ಅವನ ಪ್ರಾಚೀನ ಮೇಲ್ಜಾತಿಯ ಪ್ರತಿಮಾ ಚಿತ್ರಣವು ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ವ್ಯಾಪ್ತಿಯನ್ನು ನಿರ್ಧರಿಸಿತು. ಭಾರತದ ಇತಿಹಾಸವು ಆರ್ಯ ಪುರುಷನ ಇತಿಹಾಸವಾಯಿತು. ಅವನ ನೆರಳಾದ ಆರ್ಯ ಮಹಿಳೆಯ ಪಾತ್ರವು ಇಡೀ ವಸಾಹಾತು ಪೂರ್ವ ಭಾರತದ ಬರವಣಿಗೆಯಲ್ಲಿ ಸುಳಿದಾಡಿತು.

ಮಹಿಳಾ ಬರವಣಿಗೆಯ ಎಲ್ಲಾ ಚರ್ಚೆಗಳು ಋಗ್ವೇದದ ಕೆಲವು ಸಾಲುಗಳನ್ನು ರಚಿಸಿದರೆನ್ನಲಾದ ಎಂಟು ಸ್ತ್ರೀಯರ ಮೇಲೆ ಕೇಂದ್ರಿತವಾಗಿದ್ದವು. ಮಹಿಳೆಯರು ಶಿಕ್ಷಿತರಾಗಿದ್ದರು ಮತ್ತು ಅತ್ಯುನ್ನತವಾದ ಆಧ್ಯಾತ್ಮಿಕ ಹಾಗು ಸಾಹಿತ್ಯದ ಸಾಧನೆಯನ್ನು ಸಾಧಿಸಬಲ್ಲರು ಎನ್ನುವುದಕ್ಕೆ ಇವರನ್ನು ಹೆಚ್ಚು ಹೆಚ್ಚು ಉದಹಾರಿಸಲಾಗುತ್ತಿತ್ತು.

ನಂತರ ಕಾಲದ ಮಹಿಳಾ ಸಾಹಿತ್ಯ ಅವಗಣನೆಗೆ ಒಳಗಾಗಿತು ಎಂದಲ್ಲ, ಆದರೆ ಚರ್ಚಿತವಾಗುತ್ತಿದ್ದ ರೀತಿ ಹೇಗಿರುತಿತ್ತೆಂದರೆ ಆರ್ಯ ಮಹಿಳೆಯೇ ಅದರ ಕೇಂದ್ರ ಬಿಂದುವಾಗಿರುತ್ತಿದ್ದಳು. ಭಕ್ತಿ ಕಾಲದ ಸಾಹಿತಿಗಳ ಪಾಂಡಿತ್ಯ (ಪ್ರತಿಭಟನೆಯನ್ನಲ್ಲ)ದ ಬಗ್ಗೆ ಮಾತ್ರವೇ ಒತ್ತಿ ಹೇಳಲಾಗುತ್ತಿತ್ತು, ಅದು ಹೇಗೆಂದರೆ ಪ್ರತಿಯೊಬ್ಬ ಸಂತನಲ್ಲಿನ ಗುಣ (ಮುಖ್ಯವಾಗಿ ನೈತಿಕ) ಆರ್ಯ ಮಹಿಳೆಗೆ ಹೆಮ್ಮೆ ಮೂಡಿಸುವಂತೆ ಇರುವುದನ್ನು ಮಾತ್ರವೇ ಎತ್ತಿ ಹಿಡಿಯಲಾಗುತ್ತಿತ್ತು.

- ಮುಂದುವರೆಯುತ್ತದೆ

- ಡಾ॥ ಕೆ.ಬಿ.ಸರಸ್ವತಿ
n.sarassri@rediffmail.com

ಪರಿಚಯ

## ಜೇನ್ ಆಸ್ಟಿನ್ ಳ 'Pride and Prejudice' ಒಂದು ವಿಶ್ಲೇಷಣೆ

(ಹಿಂದಿನ ಸಂಚಿಕೆಯಿಂದ ಮುಂದುವರಿದ ಭಾಗ)

ಕಥೆಯ ತಿರುವಿಗೆ ಎಲಿಜಾಳ ಪೆಂಬರ್ಲಿ ಭೇಟಿ ಅತ್ಯಂತ ಮುಖ್ಯವಾಗುತ್ತದೆ. ಅಲ್ಲಿಂದಲೇ ಎಲಿಜಾ ಬದಲಾಗುವುದು ಮತ್ತು ಡಾರ್ಸಿಯಲ್ಲಾಗುವ ಬದಲಾವಣೆ ಸ್ಪಷ್ಟವಾಗುವುದು. ಅಷ್ಟರಲ್ಲೇ ಕಥೆಗೆ ಇನ್ನೊಂದು ಬಹು ಮುಖ್ಯ ತಿರುವು ಕೊಡುವ ಘಟನೆಯೊಂದು ನಡೆಯುತ್ತದೆ. ಪ್ರವಾಸಕ್ಕೆಂದು ಬ್ರೈಟನ್‌ಗೆ ಹೋಗಿದ್ದ ಲಿಡಿಯಾ ಅಲ್ಲಿಂದ ವಿಕ್‌ಹ್ಯಾಮ್‌ನೊಂದಿಗೆ ಓಡಿಹೋಗಿದ್ದಾಳೆಂಬ ಸುದ್ದಿಯಿದ್ದ ಪತ್ರವನ್ನು ಜೇನ್ ಎಲಿಜಾಗೆ ಕಳಿಸುತ್ತಾಳೆ. ಡಾರ್ಸಿಯೆದುರೇ ಪತ್ರ ಓದುವ ಎಲಿಜಾ ಮತ್ತು ಗಾರ್ಡಿನರ್ ದಂಪತಿಗಳು ಆತಂಕಗೊಂಡು ಲಾಂಗ್‌ಬರ್ನ್‌ಗೆ ಹಿಂದಿರುಗುತ್ತಾರೆ.

ಮಿ. ಬಿನೆಟ್ ಮತ್ತು ಮಿ. ಗಾರ್ಡಿನರ್ ಅವರನ್ನು ಹುಡುಕಿಕೊಂಡು ಲಂಡನ್‌ಗೆ ತೆರಳುತ್ತಾರೆ. ಎಲ್ಲವನ್ನೂ ತಿಳಿದ ಡಾರ್ಸಿ ಅವರನ್ನು ಪತ್ತೆಹಚ್ಚುವಲ್ಲಿ ಯಶಸ್ವಿಯಾಗುತ್ತಾನೆ. ಆದರೆ ವಿಕ್‌ಹ್ಯಾಮ್ ತಾನು ಲಿಡಿಯಾಳನ್ನು ಮದುವೆಯಾಗಲು ಅವಳ ತಂದೆ ಅವಳ ಪಾಲಿನ ಆಸ್ತಿಯನ್ನು ತನಗೆ ಕೊಡಬೇಕೆಂಬ ಷರತ್ತು ಹಾಕುತ್ತಾನೆ. ಹಣವಿಲ್ಲದೆ ಅಲೆದಾಡುವ ಬಿನೆಟ್ ಸಹಾಯಕ್ಕೆ ಬರುವ ಡಾರ್ಸಿ ವಿಕ್‌ಹ್ಯಾಮ್ ಬೇಡಿಕೆಯನ್ನು ತೀರಿಸಿ ಅವರ ಮದುವೆ ಮಾಡಿಸುತ್ತಾನೆ.

ಇದೆಲ್ಲವನ್ನೂ ತಿಳಿದ ಎಲಿಜಾ, ಡಾರ್ಸಿ ತನ್ನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದಾನೆಂಬುದು ಖಚಿತವಾಗಿ ಸಂತೋಷಗೊಳ್ಳುತ್ತಾಳೆ. ಅದೇ ವೇಳೆಗೆ ಬಿಂಗ್ಲೆ ಲಾಂಗ್‌ಬರ್ನ್ ಗೆ ಬಂದು ಜೇನ್‌ಳನ್ನು ಮದುವೆಯಾಗುವ ಪ್ರಸ್ತಾಪ ಮಾಡುತ್ತಾನೆ. ಮದುವೆ ನಿಶ್ಚಯವಾಗುತ್ತದೆ. ಆದರೆ ಅನಿರೀಕ್ಷಿತವಾಗಿ ಬರುವ ಲೇಡಿ ಕ್ಯಾಥರಿನ್ ಎಲಿಜಾಳೊಂದಿಗೆ ಮಾತನಾಡಿ ತನ್ನ ಮಗಳು ಆ್ಯನ್‌ಳನ್ನು ಡಾರ್ಸಿಗೆ ಕೊಟ್ಟು ಮದುವೆ ಮಾಡುವ ಉದ್ದೇಶ ಹೊಂದಿರುವುದರಿಂದ ಎಲಿಜಾ ಡಾರ್ಸಿಯಿಂದ ದೂರವಿರಬೇಕೆಂದು ಎಚ್ಚರಿಸುತ್ತಾಳೆ. ಲೇಡಿ ಕ್ಯಾಥರಿನ್‌ಳ ಶ್ರೀಮಂತಿಕೆಯ ಗರ್ವವನ್ನು ಅರಿತಿದ್ದ ಎಲಿಜಾ ದಿಟ್ಟತನದಿಂದಲೇ ಈ ವಿಚಾರದ ಬಗ್ಗೆ ಡಾರ್ಸಿಯೇ ತೀರ್ಮಾನ ಮಾಡಲಿ ಎಂದು ಉತ್ತರಿಸುತ್ತಾಳೆ.



ನಂತರ ಡಾರ್ಸಿ ಬಿಂಗ್ಲೆಯೊಂದಿಗೆ ಲಾಂಗ್‌ಬರ್ನ್‌ಗೆ ಬಂದು ಎಲಿಜಾಳಲ್ಲಿ ತನ್ನ ಪ್ರೇಮ ಪ್ರಸ್ತಾಪ ಮಾಡುತ್ತಾನೆ. ಹಿಂದೆ ಅವನು propose ಮಾಡಿದಾಗ ನಿರಾಕರಿಸಿದ್ದ ಎಲಿಜಾ ಈಗ ಸಂತೋಷದಿಂದ ಒಪ್ಪಿಕೊಳ್ಳುತ್ತಾಳೆ. ಎರಡೂ ಮದುವೆಗಳು ಸಂಭ್ರಮದಿಂದ ನಡೆಯುತ್ತವೆ. ಬಿಂಗ್ಲೆ ನೆದರ್‌ಫೀಲ್ಡ್‌ಅನ್ನು ಮಾರಿ ಪೆಂಬರ್ಲಿ ಬಳಿ ಒಂದು ಎಸ್ಟೇಟ್ ಕೊಂಡು ಜೇನ್ ಜೊತೆ ತೆರಳುತ್ತಾನೆ. ಎಲಿಜಾ ಡಾರ್ಸಿ ಜೊತೆ ಪೆಂಬರ್ಲಿಗೆ ಹೋಗುತ್ತಾಳೆ. ಲಿಡಿಯಾ–ವಿಕ್‌ಹ್ಯಾಮ್ ಸಂಸಾರ ಜಗಳ, ಅಸಂತೋಷದೊಂದಿಗೆ ಸಾಗುತ್ತದೆ. ವಿಕ್‌ಹ್ಯಾಮ್ ಮಾಡುವ ಸಾಲವನ್ನು ಎಲಿಜಾ ತೀರಿಸುತ್ತಾಳೆ. ತನ್ನ ಐದು ಮಕ್ಕಳಲ್ಲಿ ಮೂವರ ಮದುವೆಯಾಗಿ ಅವರ ಜೀವನ settle ಆದ್ದರಿಂದ ಮಿಸಸ್ ಬಿನೆಟ್‌ಗೆ ಈಗ ಕೊಂಚ ನೆಮ್ಮದಿ.

ಎಲ್ಲರ ಜೀವನದಲ್ಲೂ ನಡೆಯುವ ಇಂತಹ ಸಾಮಾನ್ಯ ಕಥೆಯನ್ನಿಟ್ಟುಕೊಂಡೇ ಅತ್ಯದ್ಭುತವಾಗಿ ಕಾದಂಬರಿಗಳನ್ನು ಸೃಷ್ಟಿಸಿರುವ ಜೇನ್ ಆಸ್ಟಿನ್‌ಳ finest craftsmanshipಗೆ ಅವಳ 'Pride and Prejudice' ಸಾಕ್ಷಿಯಾಗಿ ನಿಂತಿದೆ.

ಇಡೀ ಕಾದಂಬರಿಯನ್ನು ಓದುತ್ತಾ ಹೋದರೆ bore ಆಗುವುದು ನಿಶ್ಚಿತ. ಏಕೆಂದರೆ, ಲಿಡಿಯಾ ವಿಕ್‌ಹ್ಯಾಮ್‌ನೊಂದಿಗೆ ಓಡಿ ಹೋಗುವುದನ್ನು ಬಿಟ್ಟರೆ ನಾವೆಲ್‌ನಲ್ಲಿ ಅಂಥ major ಘಟನೆಗಳಾವುವೂ ಇಲ್ಲ. ಅಲ್ಲಿರುವುದು ಬರೀ ಮಾತು, ಮಾತು, ಮಾತು. ಅದನ್ನು ಬಿಟ್ಟರೆ ಪಾರ್ಟಿ, ಹಾಡು, ನೃತ್ಯ. ಆದರೆ ಇವುಗಳ ನಡುವೆಯೇ ಡಾರ್ಸಿ ಮತ್ತು ಎಲಿಜಾರ 'ಪ್ರೈಡ್' ಮತ್ತು 'ಪ್ರೆಜುಡಿಸ್' ಒಂದು ಮತ್ತೊಂದಕ್ಕೆ ಸೋತು ಇಬ್ಬರೂ ಪರಸ್ಪರ confess ಮಾಡಿಕೊಳ್ಳುವ ಮೂಲಕ ಆಗುವ reconciliation ಕಥೆಯ ಬಹು ಮುಖ್ಯ ಭಾಗ. ಕಾದಂಬರಿ ನಿಜವಾಗಿಯೂ serious ಆಗುವುದೇ ಡಾರ್ಸಿ ಎಲಿಜಾಳಲ್ಲಿ ಪ್ರೇಮ ಪ್ರಸ್ತಾಪ ಮಾಡಿದ ನಂತರ. ಅಲ್ಲಿಯವರೆಗೂ audienceಗೆ ಡಾರ್ಸಿ ಒಬ್ಬ villain ಆಗಿಯೇ ಕಾಣುತ್ತಾಹೋಗುತ್ತಾನೆ. ಏಕೆಂದರೆ ಇಲ್ಲಿ

ಪ್ರೇಕ್ಷಕ ಎಲಿಜಾಳ ಕಣ್ಣುಗಳಿಂದ ಎಲ್ಲವನ್ನು ನೋಡಿ ಅರ್ಥಮಾಡಿಕೊಳ್ಳುತ್ತಾನೆಯೇ ಹೊರತು ತನ್ನ ಬುದ್ಧಿಗೆ ತೋರಿದಂತಲ್ಲ. ಹಿಗೆ ನಾವೆಲ್‌ಅನ್ನು ಓದುತ್ತಾ ಓದುಗ ತನ್ನನ್ನು ತಾನೆ ಮರೆಯುವಂತೆ ಮಾಡುವ ಆಸ್ಟಿನ್‌ಳ ಕೌಶಲ್ಯ ಅದ್ಭುತ. ಎಲ್ಲವನ್ನೂ ಎಲಿಜಾ ಹೇಗೆ ಭಾವಿಸುತ್ತಾಳೆಯೋ ವೀಕ್ಷಕನೂ ಹಾಗೆಯೇ ಭಾವಿಸುವುದು ಆಸ್ಟಿನ್‌ಳ ಅನನ್ಯ ಕಥನ ನಿರೂಪಣೆಗೆ ಸಾಕ್ಷಿಯಾಗಿದೆ. ಆದ್ದರಿಂದಲೇ ಎಲಿಜಾ ಡಾರ್ಸಿಯನ್ನು ಒಪ್ಪಿಕೊಳ್ಳುವವರೆಗೂ ಡಾರ್ಸಿ ನಮಗೂ ಕೆಟ್ಟತವನಾಗಿ ಕಾಣುವುದು. ಇದು ಎಲಿಜಾಳ weaknes ಕೂಡ ಹೌದು. ಕಾದಂಬರಿಯ moving spirit ಆಗಿರುವ, ಪರಿಪೂರ್ಣ ವ್ಯಕ್ತಿತ್ವ ಹೊಂದಿರುವ ಅವಳಲ್ಲಿರುವ ಒಂದೇ negative eliment ಎಂದರೆ prejudice. ಎಲ್ಲರನ್ನೂ, ಎಲ್ಲವನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳುವ ಎಲಿಜಾ ಈ ಬಿಮ್ಮಿನಿಂದಾಗಿಯೆ ಡಾರ್ಸಿ, ವಿಕ್‌ಹ್ಯಾಮ್ ಮತ್ತು ತನ್ನೊಟ್ಟಿಗೇ ಬೆಳೆದ ಗೆಳತಿ ಚಾರ್ಲಟ್‌ಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವಲ್ಲಿ ವಿಫಲವಾಗುತ್ತಾಳೆ. ಡಾರ್ಸಿಯ ಹಮ್ಮೊಂದೇ ಅವಳಿಗೆ ದೊಡ್ಡದಾಗಿ ಕಾಣುವುದರಿಂದ ಅದರ ಹಿಂದಿನ ಅವನ ಸುಗುಣಗಳು ಅವಳಿಗೆ ಕಾಣುವುದೇ ಇಲ್ಲ. ಆದ್ದರಿಂದಲೇ ವಿಕ್‌ಹ್ಯಾಮ್ ಹೇಳುವ ಎಲ್ಲವನ್ನೂ ಅವಳು ಸತ್ಯವೆಂದು ನಂಬುವುದು. ಒಂದು ಹಂತದಲ್ಲಿ ವಿಕ್‌ಹ್ಯಾಮ್ ಕಡೆ ಆಕರ್ಷಿತಳೂ ಆಗುತ್ತಾಳೆ. ಅವನೆಂಥವನೆಂದು ಗೊತ್ತಿದ್ದೂ ಮನೆಯವರಿಗೆಲ್ಲ ಅದನ್ನು ಹೇಳುವುದಿಲ್ಲ. ಹೇಳಿದ್ದರೆ ಲಿಡಿಯಾ ಅವನೊಂದಿಗೆ ಓಡಿ ಹೋಗುವುದನ್ನು ತಪ್ಪಿಸಬಹುದಿತ್ತು. ಆದರೆ ಇಲ್ಲಿಯೂ ಎಲಿಜಾ ಎಡವುತ್ತಾಳೆ.

ಆದರೆ ಒಂದು ರೀತಿಯಲ್ಲಿ ಅದೇ ಅವಳ ಮತ್ತು ಡಾರ್ಸಿ ನಡುವಿನ ಪ್ರೇಮ ಗಟ್ಟಿಯಾಗಲು ಸಹಾಯ ಮಾಡುತ್ತದೆ. ಡಾರ್ಸಿ ಪತ್ರದಿಂದ ಮತ್ತು ಪೆಂಬರ್ಲಿ ಭೇಟಿಯಿಂದ ಅವನೆಡೆಗೆ ವಾಲಿದ್ದ ಎಲಿಜಾ, ಲಿಡಿಯಾ-ವಿಕ್‌ಹ್ಯಾಮ್ ವಿಷಯದಲ್ಲಿ ಅವನು ವಹಿಸಿದ ಪಾತ್ರದಿಂದ ಅವನನ್ನು ಸಂಪೂರ್ಣವಾಗಿ ಪ್ರೀತಿಸಲು ಆರಂಭಿಸುತ್ತಾಳೆ. ಅಲ್ಲಿಯವರೆಗೂ ತಾನೂ ಒಬ್ಬ Eliza ಆಗಿರುವ ಓದುಗ ನಂತರ ನಿಜವಾದ ಪ್ರೇಕ್ಷಕನಾಗುತ್ತಾನೆ. ಎಲಿಜಾ ಮಾಡುವ ತಪ್ಪುಗಳು ಅವಳದ್ದಲ್ಲವೇ ಅಲ್ಲ. ಏಕೆಂದರೆ ಎಲ್ಲರ ಜೀವನದಲ್ಲೂ ನಡೆಯವ ಆ ರೀತಿಯ misunderstandingಗಳು ಅದರಿಂದಾಗುವ confusionಗಳು ಅದಕ್ಕೆ ಕಾರಣವಾಗುವ ಹಮ್ಮು-ಬಿಮ್ಮುಗಳಿಂದ ಕೂಡಿದ ವ್ಯಕ್ತಿತ್ವಗಳು, ಆಸ್ಟಿನ್ ಕಾದಂಬರಿಯಲ್ಲಿ ಪಾತ್ರಗಳಾಗಿವೆ. ಇದು ಆಸ್ಟಿನ್‌ಳ ಅದ್ಭುತ, ಕಲಾತ್ಮಕ ಪಾತ್ರ ಚಿತ್ರಣಕ್ಕೆ ಸಾಕ್ಷಿ. ಇಲ್ಲೇ ಕಾದಂಬರಿ ನಮಗೆ ಹತ್ತಿರವಾಗುವುದು.

ಪ್ರೀತಿ-ಮದುವೆ-ಸಂಬಂಧಗಳ ಸುತ್ತವೇ ಹೆಣೆದುಕೋಡಿರುವ 'ಪ್ರೈಡ್ ಅಂಡ್ ಪ್ರೆಜುಡಿಸ್'ನಲ್ಲಿ ಮುಖ್ಯವಾಗಿ ಕಾಣುವುದು ಜೇನ್-ಬಿಂಗ್ಲೆ ಮತ್ತು ಎಲಿಜಾ-ಡಾರ್ಸಿ ನಡುವಿನ ಪ್ರೀತಿ. ಜೇನ್-ಬಿಂಗ್ಲೆ ಪ್ರೀತಿ ಕಥೆಯ main courseಗೆ ಯಾವುದೇ ಅಡೆ ತಡೆ ಮಾಡದೆ ಮುಂದುವರಿದರೆ, ಡಾರ್ಸಿ-ಎಲಿಜಾ ಆರಂಭದಿಂದಲೂ ಹಾವು-ಮುಂಗುಸಿಗಳಂತೆ ಎದುರಾಳಿಗಳಾಗಿದ್ದುಕೊಂಡೇ ಕೊನೆಗೆ ಹಾಲು-ಜೇನಿನಂತಾಗುತ್ತಾರೆ. ಜೊತೆಗೆ ಸಾಮಾನ್ಯವಾಗಿ ಹೀರೋ-ಹೀರೋಯಿನ್‌ಗಳು ಯಾವಾಗಲೂ ಒಳ್ಳೆಯ ಗುಣಗಳಿಂದ ಕೂಡಿರುವರೆಂದು ಭಾವಿಸುವ ಪ್ರೇಕ್ಷಕ ಒಂದು ಹಂತದವರೆಗೂ ಬಿಂಗ್ಲೆ-ಜೇನ್‌ರನ್ನು ನಿಜವಾದ ಹೀರೋ ಹೀರೋಯಿನ್‌ಗಳನ್ನಾಗಿ ಕಾಣುತ್ತಾನೆಯೇ ಹೊರತು ಡಾರ್ಸಿ-ಎಲಿಜಾರನ್ನಲ್ಲ. ಇದಕ್ಕೆ ಕಾರಣ ಅವರಲ್ಲಿರುವ ಹಮ್ಮು-ಬಿಮ್ಮುಗಳೆಂಬ ನ್ಯೂನತೆಗಳು. ಪರಿಪೂರ್ಣ ವ್ಯಕ್ತಿತ್ವದಲ್ಲೂ ಈ ನ್ಯೂನತೆಗಳಿರುವುದರಿಂದಲೇ ಅವರ ಪಾತ್ರಗಳು complex ಆಗುತ್ತಾಹೋಗುವುದು. ಜೊತೆಗೆ ಎಲ್ಲ ಜನರೂ good ಮತ್ತು badಗಳ ಮಿಶ್ರಣವೆಂಬ ಸತ್ಯವನ್ನೂ ಆಸ್ಟಿನ್ ಇಲ್ಲಿ ಬಿಂಬಿಸಿದ್ದಾಳೆ.

ಇನ್ನು ಮದುವೆ ವಿಚಾರಕ್ಕೆ ಬಂದರೆ ಮದುವೆ ಬಗೆಗಿನ ಆಸ್ಟಿನ್ ದೃಷ್ಟಿಕೋನ ನಾವೆಲ್‌ನಲ್ಲಿ ನಡೆಯುವ ವಿವಿಧ ರೀತಿಯ ಮದುವೆಗಳಲ್ಲಿ ಸ್ಪಷ್ಟವಾಗುತ್ತದೆ. ಇಲ್ಲಿ ನಡೆಯುವ ಮೊದಲ ಮದುವೆ ಚಾರ್ಲಟ್ ಮತ್ತು ಕಾಲಿನ್ಸ್‌ರದ್ದು. ಆಗಲೇ 27 ತುಂಬಿರುವ ಚಾರ್ಲಟ್ ಮತ್ತು ತನ್ನ ಹಿಂದೆ ಇನ್ನೂ ಸಾಕಷ್ಟು ತಂಗಿಯರಿರುವುದರಿಂದ ತನ್ನ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ಕಾಲಿನ್ಸ್ ಮದುವೆ proposal ಕೊಟ್ಟ ಕೂಡಲೇ ಒಪ್ಪುತ್ತಾಳೆ. ಇದು ಒಂದು secured lifeಗಾಗಿ ಜೀವನದ convenienceಗಳಿಗಾಗಿ ಆಗುವ ಮದುವೆ. ಕಾಲಿನ್ಸ್ ಎಂಥವನೆಂದು ಗೊತ್ತಿದ್ದೂ ಅವನನ್ನು ಮದುವೆಯಾಗುವಳಲ್ಲ ಎಂದು ಎಲಿಜಾ ಚಿಂತಿಸುತ್ತಾಳೆ. ಅವಳನ್ನು ಅರ್ಥಮಾಡಿಕೊಳ್ಳುವಲ್ಲಿ ಎಲಿಜಾ ಸೋಲುವುದು ಇಲ್ಲೇ. ಅವನನ್ನು ಮದುವೆ

ಯಾದಗೆ ಚಾರ್ಲಟ್ ಎಂದಿಗೂ ಸುಖವಾಗಿರುವುದಿಲ್ಲ ಎಂದುಕೊಳ್ಳುವ ಎಲಿಜಾಳ ಎದುರು ಚಾರ್ಲಟ್ ಸುಖವಾಗಿಯೇ ಸಂಸಾರ ನಡೆಸುತ್ತಾಳೆ. ಇಬ್ಬರಲ್ಲಿ ಒಬ್ಬರು ಸೋತಾಗಲೇ ಜೀವನದಲ್ಲಿ ಯಶಸ್ಸು ಸಾಧ್ಯ ಎಂದು ನಂಬುವ ಚಾರ್ಲಟ್ ತನ್ನ ಆಸೆಗಳನ್ನು ಕಟ್ಟಿಟ್ಟು ಗಂಡನೇ ಎಲ್ಲವೆಂದು ಬದುಕುತ್ತಾಳೆ. ಇದು ಎಲಿಜಾ ಹನ್ಸ್‌ಫರ್ಡ್‌ಗೆ ಭೇಟಿ ನೀಡಿದಾಗ ಸ್ಪಷ್ಟವಾಗುತ್ತದೆ. ಆದರೆ ಎಲಿಜಾಳ ಮೂಲಕ ಆಸ್ಟಿನ್ ಈ ರೀತಿಯ ಮದುವೆಯನ್ನು ತಿರಸ್ಕರಿಸುತ್ತಾಳೆ.

ಎರಡನೇ ಮದುವೆ ಲಿಡಿಯಾ-ವಿಕ್‌ಹ್ಯಾಮ್‌ರದ್ದು. ಮಾನಸಿಕವಾಗಿ ಮತ್ತು ಬೌದ್ಧಿಕವಾಗಿ ಇನ್ನೂ mature ಆಗಿರದ ಲಿಡಿಯಾಗೆ ಮದುವೆಯ seriousnessನ ಕಲ್ಪನೆಯಿಲ್ಲ ಅವಳ ಪ್ರಕಾರ, ಮದುವೆ ಒಂದು passion. "ಎಲ್ಲರೂ ಮದುವೆಯಾಗುತ್ತಾರೆ; ತಾನೂ ಮದುವೆಯಾಗಬೇಕು" ಎಂದು ವಿಕ್‌ಹ್ಯಾಮ್ ಜೊತೆ ಓಡಿಹೋಗುವ ಅವಳಿಗೆ ಇದೆಲ್ಲ ತನ್ನ ವಯಸ್ಸಿನ ಹಾಗೂ ವಿಕ್‌ಹ್ಯಾಮ್ ಮೇಲಿನ ಮೋಹದ (ಪ್ರೀತಿಯಲ್ಲ) ಪ್ರಭಾವವೆಂದು ಗೊತ್ತಿಲ್ಲ. ಸಾಂಸಾರಿಕ ಜೀವನದಲ್ಲಿ fail ಆಗುವ ಈ ಮದುವೆ ಕೂಡ ಸರಿಯಲ್ಲವೆಂಬುದನ್ನು ಆಸ್ಟಿನ್ ಸ್ಪಷ್ಟವಾಗಿ ತೋರಿಸುತ್ತಾಳೆ.

ಕಾದಂಬರಿಯ ಅಂತ್ಯದಲ್ಲಿ ನಡೆಯುವ ಜೇನ್-ಬಿಂಗ್ಲೆ ಮತ್ತು ಎಲಿಜಾ-ಡಾರ್ಸಿ ಮದುವೆಗಳು ಜೀವನವನ್ನು ಯಶಸ್ಸಿಗೆ ಕೊಂಡೊಯ್ಯುತ್ತವೆಂಬುದನ್ನು ಆಸ್ಟಿನ್ ತೋರಿಸುತ್ತಾಳೆ. ಇದು passionಗಾಗಲೀ, secured life ಮಾತ್ರಕ್ಕಾಗಲೀ ಆಗುವ ಮದುವೆಯಲ್ಲ; ಪ್ರೀತಿಯಿಂದ ಪರಸ್ಪರ ಸರಿಯಾಗಿ ಅರ್ಥಮಾಡಿಕೊಂಡು ಏರ್ಪಡುವ ಸಂಬಂಧ. ತನ್ನನ್ನು ಎಲಿಜಾಳಲ್ಲಿ ಕಾಣುವ ಆಸ್ಟಿನ್ ಇದು ಅತ್ಯಂತ ಸರಿಯಾದ ಮದುವೆಯೆಂಬುದನ್ನು ತೋರಿಸುತ್ತಾಳೆ. ಹಾಗೆಯೇ ವೈವಾಹಿಕ ಸಂಬಂಧಗಳು ಹೇಗಿರಬೇಕೆಂಬುದನ್ನು ಸದಾ ಪ್ರೀತಿ-ಸಂತೋಷಗಳಿಂದ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಯಶಸ್ವಿ ಜೀವನ ನಡೆಸುತ್ತಿರುವ ಗಾರ್ಡಿನರ್ ದಂಪತಿಗಳ ಮೂಲಕ ತೋರಿಸುತ್ತಾಳೆ. ಆದರೆ, ಗಾರ್ಡಿನರ್‌ನ ಸ್ವಂತ ತಂಗಿ ಮಿಸಸ್ ಬಿನೆಟ್ ಅಂತಹ ಜೀವನದಿಂದ ಬಹುದೂರವಿರುತ್ತಾಳೆ. ಸದಾ nervous ಆಗಿರುವ ಆ ಭಾವುಕ ಜೀವಿಗೆ ಮಕ್ಕಳ ಮದುವೆ ಬಿಟ್ಟು ಬೇರೆ ಚಿಂತೆಯಿಲ್ಲ. ಮಕ್ಕಳ ಮದುವೆ ಕೂಡಿಬಂದರೂ ಹಣವಿಲ್ಲದ ಆಕೆಯ ಗಂಡನಿಗೆ ಜೀವನದಲ್ಲಿ seriousness ಇಲ್ಲ. ಎಲಿಜಾ ಮತ್ತು ಡಾರ್ಸಿಯರು ಎಂದಿಗೂ ತಮ್ಮ ತಪ್ಪುಗಳನ್ನು ಅರಿತು ಬದಲಾಗುವುದೇ ಇಲ್ಲವೇನೋ ಎಂದುಕೊಳ್ಳುವ ಪ್ರೇಕ್ಷಕನಿಗೆ ಆಶ್ಚರ್ಯವೆಂಬಂತೆ ಅವರಲ್ಲಿ ಬದಲಾವಣೆಯಾಗುತ್ತದೆ. ಆದರೆ, ಕಥೆ ಸಂತೋಷದಿಂದ ಮುಕ್ತಾಯವಾದರೂ ತಮ್ಮ ತಪ್ಪುಗಳ ಅರಿವಾಗದ (ಅಥವ ಅರಿವಾದರೂ ಸರಿಯಾದುದನ್ನು ಪಾಲಿಸಬೇಕೆಂಬ seriousness ಬಾರದೇ ಇರುವ) ಬಿನೆಟ್ ದಂಪತಿಗಳು ಕಥೆಯ ಆರಂಭದಲ್ಲಿ ಹೇಗಿದ್ದರೋ ಹಾಗೆಯೇ ಉಳಿಯುವುದೂ ಪ್ರೇಕ್ಷಕನಿಗೆ ಅಷ್ಟೇ ಆಶ್ಚರ್ಯವನ್ನುಂಟುಮಾಡುತ್ತದೆ.

* ಪ್ರಕಟವಾಗಿ ಎರಡು ನೂರು ವರ್ಷಗಳಾದ ನೆನಪಿಗಾಗಿ ಈ ಲೇಖನ

* 'ಪ್ರೈಡ್ ಅಂಡ್ ಪ್ರೆಜುಡಿಸ್' ಕಾದಂಬರಿಯನ್ನು ಪ್ರೊ. ದೇ. ಜವರೇಗೌಡ ವರು "ಹಮ್ಮು ಬಿಮ್ಮು" ಶೀರ್ಷಿಕೆಯೊಂದಿಗೆ ಅನುವಾದಿಸಿದ್ದಾರೆ.)

- ಸಿದ್ಧರಾಮಯ್ಯ ಡಿ.ಎಂ
kalpasahyadri@gmail.com



| ಕವಿತೆ | ನೆನಪಾಗುತ್ತಿಲ್ಲ.... |
| --- | --- |

ಚಂದಿ ಆಯುತ್ತಾ ಕಣ್ಣುಗಳು
ಬೀದಿಗಳ ಗುಡಿಸುವಾಗ
ಅಕ್ಷರಗಳು ನೆನಪಾಗುತ್ತಿಲ್ಲ.
ನೆತ್ತರ ನದಿಗಳು ಹರಿಯುತ್ತಾ
ಆಲದ ಬಿಳಲುಗಳ ನೇವರಿಸುವಾಗ
ಬಹಳ ಯುದ್ಧಗಳು ಗೆಲ್ಲಲು
ಬಾಕಿ ಉಳಿದಿರುವಾಗ
ಅಕ್ಷರಗಳು ನೆನಪಾಗುತ್ತಿಲ್ಲ.
ಮನಸ್ಸುಗಳು ಬೆಚ್ಚಗಾಗುವಾಗ
ಬಣವೆಯೊಳಗಿನ ಬಿಸಿಯಂತೆ
ಸೂರ್ಯನು ಸುಂಕ ಕೇಳದೆ ಬಿಸಿಲ ಸುರಿಸುವಾಗ
ಅಕ್ಷರಗಳು ನೆನಪಾಗುತ್ತಿಲ್ಲ.

– ಡಾ॥ ಕೆ.ಬಿ.ಸರಸ್ವತಿ



Prathispanda Kannada Monthly literary cultural periodical Title verification no.- KARKAN 22840/10/1/2012 TC

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur